ಗೊಂಡಿವೆ : ಈ ಬಗ್ಗೆ ಪೈಯವರ ವಿಚಾರಲಹರಿ (ನಿರ್ಣಯಗಳಲ್ಲ) ಏನೆಂಬುದನ್ನು ತಿಳಿಸುತ್ತವೆ.

ಇದೊಂದು ಬದಿಯ ಮಾತು. ಉಗ್ರಾಣ ಮಂಗೇಶರಾಯರೂ, ಮೆಂ. ಭೀ. ಲೋಕಾಪುರರು ಬರಿಯ ಶಾಲಾ ಮಾಸ್ತರರು. ಅವರು ತಕ್ಕ ಮಟ್ಟಿಗೆ ಸಾಹಿತ್ಯಾಭ್ಯಾಸಿಗಳೂ ಹೌದೆಂದು ಸ್ಥಳಿಕರಿಗೆ, ನೆರೆಯವರಿಗೆ ಮಾತ್ರ ಗೊತ್ತು. ಅವರುಗಳು ವಿದ್ವಾಂಸರೂ ಸಂಶೋಧಕರೂ ಆಗಿದ್ದರೆನ್ನುವುದು ಇಲ್ಲಿಯ ಪತ್ರಗಳಿಂದಲೇ ನಮಗೆ ಮನದಟ್ಟಾಗುವುದಲ್ಲವೆ.

**ಸ್ವಭಾವ ದರ್ಶನ**

ಪೈಗಳ ಸ್ವಭಾವ ವಿಶೇಷತೆಗಳಾದ ಲೆಕ್ಕಾಚಾರ, ಪ್ರಸಿದ್ಧಿ ವಿಮುಖತೆ ಮೊದಲಾದುವು ಈಗಾಗಲೇ ಪರಿಚಿತ. ಇಲ್ಲಿಯ ಪತ್ರಗಳಿಂದ ಅವಕ್ಕೆ ಪುಷ್ಟಿ ಇಲ್ಲವೆ ಹೊಸ ಅಂಶಗಳು ದೊರೆಯುವವೊ ಹೇಗೆಂಬುದನ್ನು ನೋಡೋಣ.

ಅಂಚೆ ವೆಚ್ಚದ ಲೆಕ್ಕಾಚಾರ ಕೆಲವು ಪತ್ರಗಳಲ್ಲಿ ಕಾಣಸಿಕೊಂಡಿದೆ. ಅಗತ್ಯಕ್ಕಿಂತ ಹೆಚ್ಚು ಹಣವನ್ನು ಯಾರಾದರೂ ಅಂಚೆ ಚೀಟುಗಳಿಗಾಗಿ ವೆಚ್ಚಮಾಡಿದಲ್ಲಿ, ಪೈಗಳು ಮೊದಲಿಗೆ ಅದನ್ನೆ ಪ್ರಸ್ತಾಪಿಸುತ್ತಿದ್ದರು. ಮುನಿಪಾಲ ರಾಜು ಅವರು ಒಂದು ಪುಸ್ತಕವನ್ನು ಪೈಗಳಿಗೆ ಕಳಿಸುವಾಗ ೧೧ ಆಣೆಯ ಸ್ಟ್ಯಾಂಪ್ ಹಚ್ಚಿದ್ದರಂತೆ (ಇದು ೧೯೫೨ ರಲ್ಲಿ). ಪೈಗಳು ಆ (ಚಿಕ್ಕ ಗಾತ್ರದ ?) ಪುಸ್ತಕವನ್ನು ಅಂಗೈಯಲ್ಲಿಯೆ ತೂಗಿನೋಡಿರಬೇಕು ! ಮೂರು ಆಣೆಯದು ಸಾಕಿತ್ತು - ಎನಿಸಿತು. ಹಾಗೆ ಬರೆದರು. 'ಇನ್ನಾದರೂ ನೆನಪಿರಲಿ' ಎಂಬ ಎಚ್ಚರದ ನುಡಿ ಬೇರೆ! ಇದೇನೂ ಜಿಪುಣತನದ ಲೆಕ್ಕಾಚಾರವಲ್ಲ. ಹಣ ಯಾರದಾದರೇನಂತೆ, ಅದು ಪೋಲಾಗಬಾರದು ಎಂಬುದು ಅದರ ಆಶಯ. (ಅದನ್ನೆ ಕೆಲವರು national waste ಎಂಬ ಗಂಭೀರವಾದ ಶಬ್ದದಿಂದ ಎತ್ತಿ ತೋರಿಸುವುದುಂಟು.)

ಅದರಂತೆ ತಮ್ಮಿಂದ ಉತ್ತರವನ್ನು ಅಪೇಕ್ಷಿಸುವವರು, ಅದಕ್ಕೆಂದು ಅಂಚೆ ಚೀಟನ್ನು ಇರಿಸುವುದೂ ಅವರ ಸ್ವಭಾವಕ್ಕೆ ಒಗ್ಗದು. ಆದರೆ ಸ್ವತಹ ತಾವು ಇನ್ನೊಬ್ಬರಿಂದ ಉತ್ತರವನ್ನು ಅಪೇಕ್ಷಿಸಿದ್ದರೆ, ಒಮ್ಮೊಮ್ಮೆ ಹಾಗೆ ಮಾರುತ್ತರದ ಕಾರ್ಡನ್ನೂ, ಅಂಚೆ ಚೀಟನ್ನೂ (ಪುಸ್ತಕ ಬೇಕಿದ್ದರೆ) ಇರಿಸುತ್ತಿದ್ದರು ! ಇನ್ನು ಪುಸ್ತಕವನ್ನು ತಾವೇ ಇಟ್ಟುಕೊಳ್ಳುವುದಿದ್ದರೆ, ಅದರ ಬೆಲೆಯನ್ನು ಸಂಬಂಧಪಟ್ಟವರಿಗೆ ಮುಟ್ಟಿಸಲು ಹಾತೊರೆಯುತ್ತಿದ್ದರು. ಕೈಲಾಸಂ ಅವರ ಮೂರು ನಾಟಕ ಪುಸ್ತಕಗಳನ್ನು ರಾಜರತ್ನಂ ಕಳಿಸಿದಾಗ "Between ourselves would you kindly permit me to remit their price to you? please do not resent." (೧೨-೧೨-೧೯೪೬) ಎಂದು ಕೇಳಿಕೊಂಡರು. ರಂ. ಶ್ರೀ. ಮುಗಳಿಯವರ ಕನ್ನಡ ಸಾಹಿತ್ಯ ಚರಿತ್ರೆಯ ಒಂದು ಹೆಚ್ಚಿನ ಪ್ರತಿ ನನ್ನಲ್ಲಿದ್ದುದನ್ನು ಪೈಗಳಿಗೆ ನಾನಾಗಿ ಕಳುಹಿಸಿದ್ದೆ. (ಮೊದಲ ಆವೃತ್ತಿಯದು). "ಇದರ ಬೆಲೆ

೮ ರೂ. ಈಗಣ ದಿನಗಳಲ್ಲಿ ಅದೊಂದು ಗಂಟು ತಾನೇ. ಆ ಹಣವನ್ನು ನಿಮಗೆ ಕಳಿಸಬೇಕೊ ? ಲೇಖಕರಿಗೊ ? " ತಿಳಿಸಬೇಕಾಗಿ ಬರೆದರು. ನಾನು ಅದಕ್ಕೆ ಉತ್ತರಿಸಲೇ ಇಲ್ಲ. ಈ ಎರಡು ಸಂದರ್ಭಗಳಲ್ಲಿ ನಮ್ಮವಲ್ಲದ ಪುಸ್ತಕಗಳನ್ನು ಕಳಿಸಿದ್ದರಿಂದಲೇ ಪೈಗಳು ಹಣದ ಮಾತನ್ನು ಎತ್ತಿದ್ದರೆಂಬುದನ್ನು ಗಮನಿಸಬೇಕು.

ಪೈಗಳ ಪ್ರಸಿದ್ಧಿ ವಿಮುಖತೆಯು ಹೆಚ್ಚಾಗಿ ಬೆಳಕಿಗೆ ಬಂದದ್ದು ಪತ್ರಗಳ ಮೂಲಕವೇ. ಸಭೆ-ಸಮಾರಂಭಗಳಲ್ಲಿ ಸನ್ಮಾನ ಹೊಂದುವ ಹಾಗೂ ಸ್ವಂತ ಕೃತಿಗಳನ್ನು ಪ್ರಕಟಿಸುವ ವಿಚಾರವಾಗಿ ಅವರು ಈ ಮನೋಭಾವವನ್ನು ವ್ಯಕ್ತಪಡಿಸಿದ್ದು, ಇಂಥ ಪ್ರಸಿದ್ಧಿ ವಿಮುಖತೆಯೇ ಸಾಕಷ್ಟು ಪ್ರಸಿದ್ಧಿಯನ್ನು ಪಡೆದಿದೆ ! ಆದಾಗ್ಯೂ ಆದರ ಕೆಲವು ಒಳಪದರುಗಳನ್ನು ಗಮನಿಸುವುದೊಳಿತು. ಸನ್ಮಾನಾದಿಗಳು ಅವರಿಗೆ ಜಾತ್ಯತಃ ಬೇಡಾಗಿದ್ದುವೆಂಬುದು ಶತಸ್ಸಿದ್ಧವಾದ ಮಾತು. ಈ ಬಗೆಯ ಕೇಳಿಕೆಗಳು ಮತ್ತೂ ಮತ್ತೂ ವ್ಯಕ್ತವಾದಾಗ ಅವರಿಗೆ ಜಿಗುಪ್ಸೆಯೇ ಮೂಡಿರಬೇಕು. ಆದಕ್ಕೇನೆ "ನೀವು ಕೊಡುವ ಸನ್ಮಾನ ಪತ್ರವನ್ನು ತೂಗು ಹಾಕಲಿಕ್ಕೆ ನಮ್ಮ ಮನೆಯ ಗೋಡೆಯಲ್ಲಿ ಜಾಗವೇ ಇಲ್ಲ" ಎಂಬ ಅಣಕದ ನುಡಿಯೂ ಒಂದು ಪತ್ರದಲ್ಲಿ (೨೪-೯-೫೮) ಕಾಣಿಸಿಕೊಂಡಿದೆ. (ಮೈಸೂರು ವಿಶ್ವವಿದ್ಯಾನಿಲಯದವರ ಗೌರವ ಡಾಕ್ಟರೇಟ್ ಪದವಿಯ ಸೂಚನೆ ಬಂದಾಗ ನಿರಾಸಕ್ತಿಯ ಪರಮಾವಧಿಯನ್ನು ತೋರಿದ್ದಾರೆ). ಮಾನಪತ್ರವೆಂಬುದು ಅವರ ದೃಷ್ಟಿಯಲ್ಲಿ ಒಂದು 'ಹಳೆಯ ಉಪಚಾರ'. "ಆ ತಕ್ಕ ಪ್ರೀತಿ ಆದರ ನಮ್ಮ ನಮ್ಮ ಮನಸ್ಸಿನಲ್ಲಿ ಇದ್ದರೆ ಅದೇ ಹೆಚ್ಚು" ಎಂದು ಸಮಾಧಾನ ಹೇಳಿದ್ದಾರೆ.

ಇದೆಲ್ಲ ತಮಗೆ ಸಲ್ಲಬಯಸಿದ್ದ ಸನ್ಮಾನಕ್ಕೆ ಸರಿಹೊಂದುತ್ತದೆ. ಆದರೆ ಬೇರೆಯವರಿಗೆ ಸನ್ಮಾನ ಮಾಡುವುದಿದ್ದಲ್ಲಿ ? ಅದು ಮಾತ್ರ ಆಗತಕ್ಕದ್ದೇ, ಅಂತೆ ! ಶಿವರಾಮ ಕಾರಂತರಿಗೆ ಸತ್ಕಾರ ಮಾಡುವ ಪ್ರಸ್ತಾಪ ಬಂದಾಗ ಪೈಗಳು ಬರೆಯುತ್ತಾರೆ :

> **ಶ್ರೀ ಶಿವರಾಮ ಕಾರಂತರಿಗೆ ಇಂಥಾ ಗೌರವಗಳು ಬೇಕಾಗಿಲ್ಲ. ಅವರ ಕೃತಿಗಳೇ ಅವರಿಗೆ ಪ್ರತ್ಯಕ್ಷ ಗೌರವ. ಆದರೆ ಲೋಕರೂಢಿ ಎಂದು ಇದೆಯಷ್ಟೇ. ಆ ಮೇರೆಗೆ ಅವರನ್ನು ಗೌರವಿಸಬೇಕು ; ಗೌರವಿಸಲೇಬೇಕು.**

ಅಂತೂ ಆ ಲೋಕರೂಢಿಯನ್ನು ತಮಗೆ ಅನ್ವಯಿಸಿಕೊಳ್ಳಲು ಪೈಗಳು ಸಿದ್ಧರಿದ್ದಿಲ್ಲ ! ಹಾಗೂ ಅಂಥ ಪ್ರಸಂಗಗಳನ್ನು ವಿನಯ ಮಿಶ್ರಿತ ಹಟದಿಂದ ದೂರವಿರಿಸುತ್ತಿದ್ದರು.

ಆದರೆ ಸ್ವಜನಪರವಾದ ದಾಕ್ಷಿಣ್ಯದಿಂದಾಗಿ ಇನ್ನು ಹಲವು ಪ್ರಸಂಗಗಳಲ್ಲಿ ಈ ಹಟವು ಹಿಂದೇಟು ಹಾಕಿದ್ದಿದೆ. ಅವರು 'ಆಸ್ಥಾನ ಕವಿ' ಎಂದು ಮದ್ರಾಸ ಸರಕಾರದಿಂದ ಸನ್ಮಾನಿತರಾದಾಗ, ಮುಂಬಯಿ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಪದವಿಯನ್ನು ಒಪ್ಪಿಕೊಂಡಾಗ, ಈ ದಾಕ್ಷಿಣ್ಯದ್ದೇ ಮೇಲುಗೈಯಾಗಿದ್ದಿತು. ಇನ್ನೊಂದು ವಿಶಿಷ್ಟ ಪ್ರಸಂಗ ಇಲ್ಲಿಯ ಪತ್ರಗಳಿಂದ ಹೊರಹೊಮ್ಮಿದೆ. ಬ್ರಹ್ಮ

ವರದ ಕರ್ನಾಟಕ ಸಂಘದವರು (ಬೈಕಾಡಿ ವೆಂಕಟಕೃಷ್ಣರಾಯರ ನೇತೃತ್ವದಲ್ಲಿ) 'ಅಜಪುರ'ವೆಂಬ ಪುಸ್ತಕವನ್ನು ಪೈಗಳಿಗೆ ಅರ್ಪಿಸಲು ನಿರ್ಧರಿಸಿದ್ದಲ್ಲದೆ, ಆಮಂತ್ರಣ ಪತ್ರವನ್ನು ಮುದ್ರಿಸಿಯೂ ಬಿಟ್ಟರು – ಪೈಗಳ ಪೂರ್ವಾನುಮತಿ ಪಡೆಯದೇ. ಆಗ ಪೈಗಳು ದಾಕ್ಷಿಣ್ಯಕ್ಕೆ ಒಳಗಾದ ಬಗೆ ಇಂತಿದೆ :

> ಸ್ವಾಮೀ, ಒಂದು ಕಡೆ ಯಾವ ಗೌರವವೂ ನನಗೆ ಬೇಡವೆಂದು ನನ್ನಷ್ಟಕ್ಕೆ ಸುಮ್ಮನಿರುವ ನನ್ನ ಅನಪೇಕ್ಷೆ, ಮತ್ತೊಂದು ಕಡೆ, ಈ ಯೋಜನೆಯಲ್ಲಿ ಇಷ್ಟರೊಳಗೆ ನೀವು ಎಷ್ಟು ಮುಂದೆ ಸಾಗಿರಬೇಕು ? ಈಗ ನಾನು ಹಿಮ್ಮೆಟ್ಟಿಸುವೆನಾದರೆ ನೀವು ಎಷ್ಟು ತ್ರಾಸ ಹೊಂದಬೇಕು? – ಎಂದು ನನ್ನನ್ನು ಮನಗುಂದಿಸುವ ಚಿಂತೆ ಇವೆರಡರ ಬಿಕ್ಕಟ್ಟಿನಿಂದ ಹೊರಹೊಮ್ಮುವರೆ ಬಗೆ ತೋರದೆ ನಿರುಪಾಯನಾಗಿ.... ಗ್ರಂಥಾರ್ಪಣವನ್ನು ಒಪ್ಪಿಕೊಳ್ಳುತ್ತೇನೆ. (೧೪-೭-೧೯೬೧ರ ಪತ್ರ).

ಆ ನಿರುಪಾಯತೆ ಅಷ್ಟಕ್ಕೇ ಮುಗಿಯಲಿಲ್ಲ ! ತಮಗೆ ಅರ್ಪಿತವಾಗಲಿರುವ ಆ ಗ್ರಂಥದಲ್ಲಿ ಅವರದೇ ಕವಿತೆಯನ್ನೂ ಪ್ರಕಟಿಸುವ ಸಂಪಾದಕರ ಸೂಚನೆಗೂ ಪೈಗಳು ತಲೆವಾಗಿ, ಕವಿತೆಯೊಂದನ್ನು ಕಳಿಸಿಕೊಟ್ಟರು. (ಜೊತೆಗೆ ಈ ಕುರಿತ ಆಭಾಸವನ್ನು ಎತ್ತಿ ತೋರಿಸಿದರು). ಇದಲ್ಲವೆ, ದಾಕ್ಷಿಣ್ಯದ ಪರಮಾವಧಿ ? ಬೈಕಾಡಿ ವೆಂಕಟಕೃಷ್ಣರಾಯರ ಬಗ್ಗೆ ಇದ್ದ ಅವರ ಅನೂನವಾದ ಸದ್ಭಾವವೇ ಈ ದಾಕ್ಷಿಣ್ಯ ಪರತೆಯ ಹಿನ್ನೆಲೆಯಾಗಿದೆ.

ಸನ್ಮಾನವಲ್ಲದಿದ್ದರೂ ಪೈಗಳು ಸಭೆಸಮಾರಂಭಗಳಲ್ಲಿ ಹಾಗೇನೆ ಭಾಗವಹಿಸಿದ ಪ್ರಸಂಗಗಳಾದರೂ ತೀರ ಕ್ವಚಿತ್ತಾಗಿ ಇವೆಯಷ್ಟೆ. ಅದರ ಕಾರಣಗಳು ನಮಗೆ ಒಂದು ಪತ್ರದಲ್ಲಿ ದೊರೆಯುತ್ತವೆ. ಹಾಗೆ ಭಾಗವಹಿಸಿದಾಗ, ಇಡೀ ಕಾರ್ಯಕ್ರಮ ಮುಗಿಯುವವರೆಗೆ ಗಂಟೆಗಟ್ಟಲೆ ಸುಮ್ಮನೆ ಕೂತಿರಬೇಕಲ್ಲವೆ. ಅದು ಅವರಿಗೆ ಒಗ್ಗದ ವಿಷಯವಾಗಿತ್ತು. ದಿ. ೮-೧-೫೭ ರಂದು ಬರೆದ ಪತ್ರದಲ್ಲಿ "ನನ್ನ ಭಾಷಣದ ದಿನ ಬೇರೆ ಯಾವ ಕೆಲಸವನ್ನೂ ಇಟ್ಟುಕೊಳ್ಳಬಾರದು. ಯಕ್ಷಗಾನ ತಾಳ-ಮದ್ದಳೆ ಅದು ಇದು, ಏನೂ ಇರಬಾರದು. ನನ್ನ ಭಾಷಣವನ್ನು ಹೊತ್ತುಂಟೇ ಮುಗಿಸಿ ನನ್ನನ್ನು ತಮ್ಮಲ್ಲಿಂದ ಹೊರಡಿಸಬೇಕು" ಎಂದು ಕೇಳಿಕೊಂಡಿದ್ದಾರೆ. (ಇಷ್ಟಕ್ಕೂ ಅವರದ್ದು ಬರೆದು ತಂದ ಭಾಷಣವೇ ಇರುತ್ತಿತ್ತು – ಅಂಥ ಪ್ರಸಂಗಗಳಲ್ಲಿ). 'ಬಹುಜನೀನವಾದ ಸಭೆಗಳಲ್ಲಿ ಭಾಗಿಯಾದರೆ ಕೆಲ ಕೆಲ ತಾಸುಗಳ ವರೆಗೆ ಕೂತಲ್ಲೇ ಕೂರಬೇಕಾಗುವ ದಂಡನೆಯನ್ನು ಅನುಭವಿಸಬೇಕಾಗುವುದೆಂದು,' ಅವರು ಇನ್ನೊಂದು ಪತ್ರದಲ್ಲಿ ಹೇಳಿಬಿಟ್ಟಿದ್ದಾರೆ. (೬-೧೧-೫೩ರ ಪತ್ರ).

ಇಂಥ ಪ್ರಸಂಗಗಳಿಂದ ತಪ್ಪಿಸಿಕೊಳ್ಳಲು, ವೃದ್ಧಾಪ್ಯದ ಅನಾರೋಗ್ಯದ ಕಾರಣವು ಪ್ರಯೋಜನಕಾರಿಯಾಗಿದ್ದಿತು. (ಅದೇನು ನೆಪವಲ್ಲ). ಮೈಸೂರಿನ ಯಾವುದೋ ಒಂದು ಸಮ್ಮೇಳನದಲ್ಲಿ ಭಾಗವಹಿಸಲು ಕರೆ ಬಂದಾಗ, ಪೈಗಳು ಅದರಿಂದ ಜಾರಿಕೊಂಡದ್ದು ಹೀಗೆ ! :

ನಿಮ್ಮ ಸಮ್ಮೇಳನದ ಅಧಿವೇಶನದ ಹೊತ್ತು, ನಮ್ಮಲ್ಲಿ ಮಳೆ ಹುಯ್ಯಲು ತೊಡಗುವ ಹೊತ್ತು - ಸೂಜಿ ಮುತ್ತಾಗಿ ಒಂದೇ ಆಗುತ್ತದೆ ...ಹೊರಹೊಮ್ಮಲಿಕ್ಕೆ ಈ ಪ್ರಾಯದಲ್ಲಿ ಮನಸ್ಸು ಅಳುಕುತ್ತದೆ. (೨೩-೫-೫೫ರ ಪತ್ರ)

ಇತ್ತ ತಮ್ಮ ಕೃತಿಗಳ ಮರುಪ್ರಕಟನೆಯನ್ನು ಅವರು ಉದ್ದಕ್ಕೂ ನಿರಾಕರಿಸುತ್ತ ಬಂದದ್ದರ ಹಿನ್ನೆಲೆ ಏನಿರಬಹುದೆಂಬುದನ್ನು ನೋಡೋಣ. ಸ್ವಾಂತಸ್ಸುಖಾಯ ಕವನಿಸಿದ ಮೇಲೆ ಅಥವಾ ಚಿಕಿತ್ಸಕ ಮನೋವೃತ್ತಿಯನ್ನು ಸಂಶೋಧನ ಲೇಖನಗಳ ಮೂಲಕ ತೃಪ್ತಿಪಡಿಸಿಯಾದ ಮೇಲೆ ಮುಗಿಯಿತಲ್ಲ - ಆ ಕೆಲಸ; ಮತ್ತೇಕೆ ಅದರ ಗೊಡವೆ ಎಂದು ಇರಬಹುದೆ? ಇಲ್ಲವೆ ಈ ಮರುಪ್ರಕಟನೆ ಅದೊಂದು ಬಗೆಯ ಆತ್ಮಪ್ರಶಂಸೆ ಇಲ್ಲವೆ ವ್ಯಾವಹಾರಿಕ ಕೆಲಸವಾಗುವುದೆಂದು ಬಗೆದರೆ? 'ಗಿಳಿವಿಂಡು' ಕೃತಿಯ ಮೊದಲ ಮುದ್ರಣಕ್ಕೇನೆ ಅವರು ಹಾಕಿದ (ಅ) ಅದು ಪಠ್ಯಪುಸ್ತಕವಾಗಬಾರದು ಮತ್ತು (ಆ) ೨೫೦ಕ್ಕಿಂತ ಹೆಚ್ಚು ಪ್ರತಿಗಳನ್ನು ಮುದ್ರಿಸಬಾರದು ಎಂಬ ಕರಾರುಗಳ ಹಿನ್ನೆಲೆಯನ್ನೂ ಇಲ್ಲಿ ಗಮನಿಸತಕ್ಕದು. 'ಗಿಳಿವಿಂಡು' ಇದರ ಎರಡನೆಯ ಆವೃತ್ತಿಯನ್ನು ರಾಜರತ್ನಂ ಹೊರತರಬೇಕೆಂದಿದ್ದಾಗ, ಅದರಲ್ಲಿ 'ಸಾಹಿತ್ಯಜ್ಞರ ಆತ್ಮಕಥನ'ದಲ್ಲಿಯ ಆತ್ಮವೃತ್ತಾಂತವನ್ನು ಸೇರಿಸ ಬಯಸಿದರು. ಆಗ "It is more or less a writing of self-praise. I don't like such things" ಎಂದು ಹೇಳಿ ನಿಷೇಧಿಸಿಬಿಟ್ಟರು. ಆದಾಗ್ಯೂ ಈ ಹಿಂದೆ ಹೇಳಿದ್ದಂತೆ ಅದರ ಮರುಮುದ್ರಣದ ವಿಚಾರವಾಗಿ ಅವರು ತೋರಿದ ಸಕ್ರಿಯವಾದ ಆಸ್ಥೆ, ಮುದ್ರಣಕ್ಕೆ ಸಂಬಂಧಿಸಿದ ಅತಿ ಸಣ್ಣ ಪುಟ್ಟ ಅಂಶಗಳಿಗೂ ಅವರು ಗಮನಕೊಟ್ಟು ಸೂಚನೆಗಳ ಮೇಲೆ ಸೂಚನೆಗಳನ್ನು - ಅದೂ, ಅವರು ಸಾಹಿತ್ಯಕ ಸನ್ಯಾಸವನ್ನು ತೊಡೆದಿದ್ದ ಇಳಿವಯದಲ್ಲಿ (೧೯೬೦) ರಾಜರತ್ನಂರಿಗೆ ಕೊಡುತ್ತಾ ಇದ್ದದ್ದು ಅಚ್ಚರಿಯ ವಿಷಯವಾಗಿದೆ. ಆ ಸೂಚನೆಗಳನ್ನು ನೋಡಿದಲ್ಲಿ, ತಮ್ಮ ನಿರೀಕ್ಷೆಯ ಮಟ್ಟಕ್ಕೆ ಇತರರು ತಮ್ಮ ಗ್ರಂಥಗಳನ್ನು ಹೊರತರಲಿಕ್ಕಿಲ್ಲ ಎಂಬ ಶಂಕೆ ಗೋವಿಂದ ಪೈಗಳಿಗೆ ಇದ್ದಿರಬೇಕು ಎನಿಸುತ್ತದೆ.

ಆದಾಗ್ಯೂ ಅಮ್ಮೆಂಬಳ ಶಂಕರನಾರಾಯಣ ನಾವಡರು, ಮುಂಬಯಿಯ ಕೆಲವರು, ಕು. ಶಿ. ಹರಿದಾಸ ಭಟ್ಟರು, ಸ್ವತಃ ಅವರ ತಮ್ಮನ ಮಗ ತುಕಾರಾಮ ಪೈಗಳು ಕೇಳಿದ್ದಾಗಲೂ ಅವರು ಒಪ್ಪಿಗೆ ಕೊಟ್ಟಿರಲಿಲ್ಲ. ಈ ಕುರಿತ ಅವರ ಒಟ್ಟಿನ ನಿಲುವು ಹೀಗಿದ್ದಿತು :

ಅವನ್ನು ನನ್ನ ಜೀವಂತ ಕಾಲದಲ್ಲೇ ಪುಸ್ತಕರೂಪದಲ್ಲಿ ಬರಮಾಡಿಕೊಳ್ಳಬೇಕೊ ಅಥವಾ ನನ್ನ ಬಳಿಕ ಅವು ಪ್ರಕಟವಾದರೆ ಲೇಸೊ ಎಂದು ನನ್ನಲ್ಲೇ ವಿಚಾರಿಸಿ ನೋಡಿ ಯಾವೊಂದು ನಿಶ್ಚಯಕ್ಕೆ ಬಂದ ಮೇಲೆ ನೋಡೋಣ ಎಂದು ಆ ಪ್ರಸಂಗವನ್ನು ಈಗ ಅಲ್ಲಿಗಲ್ಲಿಗೆ ಮಡಗಿಸಿರುತ್ತೇನೆ.

ಕೊನೆಗೊಮ್ಮೆ ಈ ಕಿರಿಕಿರಿಗೆ ಬೇಸತ್ತೋ ಏನೋ ತಮ್ಮ ಬರಹಗಳೆಲ್ಲದರ ಸ್ವಾಮಿತ್ವವನ್ನು ಕಾವ್ಯಾಲಯ ಪ್ರಕಾಶಕರಿಗೆ ಒಪ್ಪಿಸಿ ಕೈತೊಳೆದುಕೊಂಡರು.*

## ಮುಪ್ಪಿನ ಕಾಲದ ಪೈಗಳು

ಮೊದಲೇ ಹೇಳಿದಂತೆ ಇಲ್ಲಿಯ ಪತ್ರಗಳಲ್ಲಿ ಹೆಚ್ಚಿನವು ಅವರ ಅಪರ ವಯಸ್ಸಿನಲ್ಲಿ ಬರೆದವುಗಳು. ಆಗಿನ ಅವರ ಅನಾರೋಗ್ಯದ ಪ್ರಸ್ತಾಪವು ಪತ್ರಗಳಲ್ಲಿ ಮೇಲಿಂದ ಮೇಲೆ ಬಂದಿದೆಯಾದ್ದರಿಂದ ಈ ಕುರಿತು ಕೆಲ ಅಂಶಗಳನ್ನು ಇಲ್ಲಿ ಎತ್ತಿಕೊಳ್ಳೋಣ.

ಕ್ರಿ. ಶ. ೧೯೫೦ರಲ್ಲಿ ಸಮ್ಮೇಳನಾಧ್ಯಕ್ಷರಾಗಿ ಮುಂಬಯಿಗೆ ಆಗಮಿಸಿದಾಗ ಅವರಿಗೆ ೬೭ನೆಯ ವಯಸ್ಸು. ಆಗ ಅವರ ಆರೋಗ್ಯ ಚೆನ್ನಾಗಿಯೇ ಇತ್ತು. ಮುಂದೆ ಕ್ರಿ.ಶ. ೧೯೫೬ರಲ್ಲಿ ಮೊದಲ ಬಾರಿಗೆ, ಅವರ ವೃದ್ಧಾಪ್ಯ ಕಾರಣದ ಜಡ್ಡಿನ ಪ್ರಸ್ತಾಪ ಬಂದಿದೆ. ಕ್ರಿ.ಶ. ೧೯೫೬ರ ಒಂದು ಪತ್ರದಲ್ಲಿ ಏಳೆಂಟು ತಿಂಗಳು ಮನೆಬಿಟ್ಟು ಹೊರಗೆ ಕಾಲಿಡಲಾರದಂತಹ ಉಬ್ಬಸ ಬೇನೆಯ ಉಲ್ಲೇಖವಿದೆ. ಅವರ ಇನ್ನೊಂದು ಬೇನೆ ನರದೌರ್ಬಲ್ಯಕ್ಕೆ ಸಂಬಂಧಿಸಿತ್ತು. ಇವೆರಡನ್ನು ಬಿಟ್ಟರೆ, ಅವರಿಗೆ ಮಧುಮೇಹ, ರಕ್ತದೊತ್ತಡ - ಎಂಬೀ ಇಳಿವಯದ ಸಾಮಾನ್ಯ ರೋಗಗಳ ತಾಪತ್ರಯವಿದ್ದಂತಿಲ್ಲ.**

ಮುಂದೆ ನರದೌರ್ಬಲ್ಯದ ಪರಿಣಾಮ ಎಷ್ಟಿತ್ತೆಂದರೆ, ಒಂದು ಸಾದಾ ಕಾರ್ಡನ್ನು ಬರೆಯುವಾಗಲೂ ಬಲದೋಳು ನೋಯಿಸುತ್ತಿತ್ತು. ಜೊತೆಗೆ ಕುಂದುತ್ತ ಸಾಗಿದ್ದ ಸ್ಮರಣ ಶಕ್ತಿ. ಹೀಗಾಗಿ ಯಾರಾದರೂ ಅಭ್ಯಾಸದ ವಿಷಯವಾಗಿ ಪ್ರಶ್ನೆ ಕೇಳಿದ್ದಾದರೆ, ಅವರಿಗೆ ಉತ್ತರ ಕೊಡುವುದಾಗುತ್ತಿಲ್ಲವಲ್ಲ - ಎಂಬ ವ್ಯಥೆಗೀಡಾಗುತ್ತಿದ್ದರು. ಇಷ್ಟೇ ಅಲ್ಲ, ಅದೇ ಕಾರಣ ಕೊಟ್ಟು ಮುಂದೆಯೂ ಆ ರೀತಿ ತಮ್ಮನ್ನು ಕೇಳಬಾರದಾಗಿ ವಿನಂತಿಸುತ್ತಿದ್ದರು :

---

* ಇದಾದ ಮೇಲಿನ, ನನಗೇ ಸಂಬಂಧಿಸಿದ ಘಟನೆಯನ್ನು ಇಲ್ಲಿ ಹೇಳಬೇಕು. 'ಗೋವಿಂದ ಪೈ ವಾಙ್ಮಯ ದರ್ಶನ'ಕ್ಕಾಗಿ ಅವರ ಬರಹಗಳನ್ನು ನೋಡಿ ಟಿಪ್ಪಣಿ ಮಾಡಿಕೊಳ್ಳಲೆಂದು ಅವರ ಮನೆಗೆ ಹೋದೆ (೧೯೬೧). ಅದು ತಮ್ಮ ಪ್ರಶಂಸೆ ಮಾಡುವ ಒಂದು ಒಳಸಂಚು ಎಂದೇ ಬಗೆದರು. 'ಇದು ಕೇವಲ ನಿಮ್ಮ ವಾಙ್ಮಯವನ್ನು ಪರಿಚಯಿಸುವ ಕೆಲಸ' ಎಂದು ಮತ್ತೆ ಮತ್ತೆ ನಾನು ಹೇಳುತ್ತಿದ್ದಾಗ "ನಾನು ಸತ್ತ ಮೇಲೆ ಏನೂ ಮಾಡಿಕೊಳ್ಳಿ. ಈಗಂತೂ ನನ್ನಲ್ಲಿ ಏನೂ ಇಲ್ಲ. ಚೀಲದಲ್ಲಿ ತುಂಬಿ ಮೈಸೂರಿಗೆ ಸಾಗಿಸಿಬಿಟ್ಟಿದ್ದೇನೆ" ಎಂದರು !

** ಅಂದ ಹಾಗೆ ಪೈಗಳು ತನ್ನ ಸಂಬಂಧಿಕರಿಗೆ ಹುಟ್ಟಿದ ಮಕ್ಕಳ ಜನ್ಮಕುಂಡಲಿ ಬರೆಕೆ, ಶುಭಾಶುಭ ಫಲಗಳನ್ನು ಹೇಳುತ್ತಿದ್ದರು. ಆದರೆ ಯಾವಾಗೋ ಒಮ್ಮೆ ಆ ಲೆಕ್ಕ ತಪ್ಪಿತೋ ಅಥವಾ ಮುಪ್ಪಿನ ಕಾಲದ ಮರವೆ ತಾನಾಗಿ ಅವರಿಗೆ ಅರಿವಾಗಿಯೋ ಏನೊ, ಬೇರೆಯವರಿಂದ ಕುಂಡಲಿ ಬರೆಯಿಸಿಕೊಡತೊಡಗಿದರು.

> ನಿಮ್ಮ ಪತ್ರದಲ್ಲಿ ಕೇಳಿರುವಂಥಾ ಕ್ಲಿಷ್ಟವಾದ ಪ್ರಶ್ನೆಗಳನ್ನು ಉತ್ತರಿಸಲಾಗುವುದಿಲ್ಲ. ಸರ್ವಥಾ ಶಕ್ಯವಿಲ್ಲ.. ಇನ್ನು ಇಂಥಾ ವಿಷಯಗಳಲ್ಲಿ ದಯವಾಡಿ ಬರೆಯಬಾರದೆಂದು ವಿನಂತಿಸುತ್ತೇನೆ. (ದಿ. ೧೯-೭-೬೧ ರಂದು ರಾಮಚಂದ್ರ ಉಚ್ಚಿಲರಿಗೆ ಬರೆದ ಪತ್ರ)

ಈ ವಿನಂತಿಯನ್ನು ಇನ್ನೂ ಹಲವರಿಗೆ ಬರೆದ ಪತ್ರಗಳಲ್ಲಿ ಕಾಣುತ್ತೇವೆ. ಹಾಗೆ ವಿನಂತಿಸಿಯೂ, ತಮಗೆ ಗೊತ್ತಿದ್ದಷ್ಟು ಮಾಹಿತಿಯನ್ನು ಕೊಟ್ಟೇ ಇದ್ದರು - P.S. ರೂಪದಲ್ಲಿ. ಪಿ. ಗುರುರಾಜ ಭಟ್ಟರಿಗೆ ಮೇಲಿನಂತೆ ಪತ್ರ ಬರೆದು, ಅದರ ಕೆಳಗಡೆ, 'ಉಡುಪಿ'ಯ ವ್ಯುತ್ಪತ್ತಿ, 'ಮಂಜುಘೋಷ - ಮಂಜುಶ್ರೀ'-ಇವುಗಳ ಸಂಬಂಧದ ಬಗ್ಗೆ ವಿವರಣೆ ಕೊಟ್ಟಿದ್ದಾರೆ (೩೦-೪-೬೨). ಅದರಂತೆ ಮೇಲ್ಕಾಣಿಸಿದ ೧೯-೭-೬೧ರ ಪತ್ರದಲ್ಲಿಯೂ ಕಾಳಿದಾಸಕೃತ ವ್ಯಾಕರಣ ವಿರುದ್ಧ ಪ್ರಯೋಗಗಳನ್ನು, ಅದರ ಸಂದಿಯಲ್ಲಿಯೇ ಗೀಚಿದ್ದಾರೆ!

ಈ ದುಸ್ಥಿತಿಯ ಮುಂದಿನ ಹೆಜ್ಜೆ ಎಂದರೆ ಇತರರು ಕಳುಹಿದ ಪುಸ್ತಕಗಳನ್ನು ಓದುವುದು ಕೂಡಾ ಪ್ರಯಾಸಕರವಾಗತೊಡಗಿತು.

> ಈಗ ಯಾವುದನ್ನೂ ಓದುವುದು ಬೇಡವೆನಿಸುತ್ತದೆ.... ಏನನ್ನೂ ಓದಬೇಕೆಂಬ ಆಸೆಯಿಲ್ಲ. ಅಪೇಕ್ಷೆ ಇಲ್ಲ. ಓದತಕ್ಕ ಸಹನಶಕ್ತಿ ತೀರ ಇಲ್ಲ. ವರ್ತಮಾನ ಪತ್ರಿಕೆಗಳನ್ನು, ಕೆಲಕೆಲವೇನೊ ಕವಿತೆ, ನಾಟಕಗಳನ್ನು ಅಲ್ಲಲ್ಲಿ ಹೊಂಚಿ ನೋಡಿಬಿಡುತ್ತೇನಲ್ಲದೆ ಮುಂಚಿನಂತೆ ಮನಸ್ಸಿಟ್ಟು ಓದಲಾಗುವುದಿಲ್ಲ. (ಅದೇ ಪತ್ರ).

ಆಗ ಅವರಿಗೆ ಬರೆಯುವುದು, ಓದುವುದು ಇವುಗಳ ಪ್ರಯಾಸವಲ್ಲದೆ ಮಾತನಾಡುವುದೂ ಕಷ್ಟದಾಯಕವಾಗತೊಡಗಿತು. 'ಈಗ ಯಾರೊಂದಿಗಾದರೂ ಕೂತು ಮಾತಾಡುವಷ್ಟು ಕೂಡಾ ತಾಳ್ಮೆ ನನಗಿಲ್ಲ. ಆದ್ದರಿಂದ ನನ್ನಲ್ಲಿಗೆ ಬರಬೇಡಿರಿ' ಎಂದು ಕೇಳಿಕೊಂಡಿದ್ದಾರೆ.

ಇಂಥ ಸ್ಥಿತಿಯಲ್ಲಿ ಅವರು ಸಾವನ್ನು ಬರಮಾಡಿಕೊಳ್ಳುವ ಸಿದ್ಧತೆಯಲ್ಲಿ ಇದ್ದರು. 'ನನ್ನ ಆರೋಗ್ಯವೀಗ ಗಾಳಿಗೊಡ್ಡಿದ ಸೊಡರಿನಂತೆ ಅತ್ತಿತ್ತ ಅಲುಗಾಡುತ್ತಿದೆ. ಇನ್ನೆಷ್ಟು ಕಾಲ ಬದುಕಬೇಕು, ಸ್ವಾಮೀ.' (೨೪-೩-೧೯೫೯ರ ಪತ್ರ). 'ಜೀವಕ್ಕೆ ಹೊರಗೆ ಹೋಗುವರೆ ಒಂದೊಂದೇ ಬಾಗಿಲು ತೆರೆಯುತ್ತಲಿದೆ.' (೮-೬-೬೨ರ ಪತ್ರ). ಇತ್ಯಾದಿ.

**'ಆತನ ಇಷ್ಟ'**

> ಎಲ್ಲಾ ಆತನ ಇಷ್ಟ. ಅದನ್ನು ಎರಡು ಕೈಗಳಿಂದಲೂ ಎತ್ತಿಕೊಂಡು ಅನುಭವಿಸಬೇಕಾದುದಷ್ಟೇ ನಮ್ಮ ಕರ್ತವ್ಯ.

ಹಣ್ಣು ಮುದುಕರು ಯಾರೂ ಹೇಳಬಹುದಾದ ಮಾತಲ್ಲವೆ, ಇದು. ಪೈಗಳ ವಿಚಾರದಲ್ಲಿ ಮಾತ್ರ ಇದು ವೃದ್ಧಕಾಲೀನ ವೈರಾಗ್ಯ ಎಂದಲ್ಲ. ಅವರು ಪ್ರತಿ ಪತ್ರದಲ್ಲಿ ಬರೀತಿದ್ದ ಶ್ರೀದೇವರೇ 'ಆತನು' ; ಅವನು ನಡೆಸಿದಂತೆ ತಾನು ಎಂಬ ನಂಬುಗೆ ಅವರಲ್ಲಿ ಎಂದಿನಿಂದಲೂ ಇದ್ದಿತು. ಈ ಸಂಕಲನದಲ್ಲಿಯ ಮೊದಲ ಪತ್ರ

ದಲ್ಲಿಯೇ (೧೯೩೦) ಅದರ ಸ್ಪಷ್ಟ ನಿದರ್ಶನವಿದೆ. ''ಹರಸುವಾತನು ದೇವ ರಲ್ಲದೆ ನಾನಲ್ಲ.''

ಶ್ರೀಕೃಷ್ಣನ ಕಡೆಗಾಲದ ಕಥೆ ಇರುವ 'ಪ್ರಭಾಸ'ವೆಂಬ ಖಂಡಕಾವ್ಯ ತಡೆದು ನಿಂತುದಕ್ಕೂ ಶ್ರೀಕೃಷ್ಣನನ್ನೇ ಹೊಣೆಯಾಗಿಸಿದ್ದರು. "ಆತನದನ್ನು ಎಂದು ಮುಗಿಸಿಕೊಳ್ಳುವನೊ ಆತನೆ ಬಲ್ಲ"! 'ನಂದಾದೀಪ'ದ ಪದ್ಯಗಳಿಗೆ ಅವರ ಪತ್ನಿ ಕೃಷ್ಣೆ ಬರಿಯ ನಿಮಿತ್ತ. ಅವಾದರೊ ದೇವರ ಮುಂದೆ ಹಚ್ಚಿದ ಹಣತೆಯ ದೀಪ ಗಳಂತೆ. ಬೇರೆ ಪದ್ಯಗಳಿಗೂ ಪ್ರೇರಣೆ ಅದೇನೇ :

> Most of the poems I have written and now I am writing are all directed or addressed to God —ಎಂದು ರಾಜರತ್ನಂಗೆ ಬರೆದ ಪತ್ರದಲ್ಲಿ ಸ್ಪಷ್ಟಪಡಿಸಿದ್ದಾರೆ. (೩-೧೨-೬೦ರ ಪತ್ರ)

ಈ ಭಕ್ತಿಭಾವನೆಯು ತಮ್ಮ ಮಟ್ಟಿಗೆ ಇದ್ದಿರಲಿ. ಆದರೆ ಇತರರಿಗೂ ಅದರ ದೀಕ್ಷೆಯನ್ನು ಕೊಡುತ್ತಿದ್ದಾರಲ್ಲ! ದಿ. ೪-೨-೧೯೫೫ರ ಈ ಉಲ್ಲೇಖ ನೋಡಿರಿ (ಸಮೇತನಹಳ್ಳಿ ರಾಮರಾಯರಿಗೆ ಬರೆದ ಪತ್ರ):

> ತಮ್ಮ ಕಾದಂಬರಿಯನ್ನು ಸುಸೂತ್ರವಾಗಿ ಕೊನೆಗಾಣಿಸುವುದೂ ಅದನ್ನು ಯಶಸ್ವಿಯಾಗಿಸುವುದೂ ತಮ್ಮದಲ್ಲ; ಆತನ ಹೊಣೆಯೆಂದೇ ಬಗೆಯಿರಿ. ಆತನು ಹಾಗೆಯೇ ತಮ್ಮ ಅಭೀಷ್ಟವನ್ನು ನೆರವೇರಿಸುವನು. ಇದೇ ಆತನ ಹೆಸರಿನಲ್ಲಿ ತಮ್ಮ ಬೆನ್ನಿನ ಮೇಲೆ ನನ್ನ ತಟ್ಟು.

ದೇವರು, ಧರ್ಮಗಳ – ವಿಷಯಕವಾದ ಶ್ರದ್ಧೆ, ಅಶ್ರದ್ಧೆ ಅವರವರ ಅನು ಭವ ಹಾಗೂ ವಿಚಾರವಾದಿತ್ವದ ಮೇಲಿಂದ ರೂಪುಗೊಳ್ಳುತ್ತದೆ. ಅಪ್ಪಟ ನಾಸ್ತಿಕರಾಗಿದ್ದ ಹಲವರು ಕಾಲಾಂತರದಲ್ಲಿ ಆಸ್ತಿಕರಾಗಬಹುದು. ಅದರಂತೆ vice versa. ಪೈಯವರಲ್ಲಿ ಮಾತ್ರ ದೈವಭಕ್ತಿ, ಶ್ರೀದೇವರಲ್ಲಿಯ ಶ್ರದ್ಧೆ ತರುಣ ವಯದಿಂದ ಅವರ ಕೊನೆಯ ದಿನದವರೆಗೂ ಇದ್ದಿತು. ಆ ನಂಬುಗೆ ಅಚಲ ವಾದದ್ದು, ಆತನ ಸರ್ವಶಕ್ತತೆಯಲ್ಲಿ ಅವರಿಗೆ ಶಂಕೆಯೆಂಬುದಿರದೇ, ಮರೆವು-ಉದಾಸೀನತೆ ಕಂಡು ಬರದೇ ಅನೂನವಾಗಿ ಏಕ ಪ್ರಕಾರವಾಗಿ ಹರಿದು ಬಂದಿದ್ದಕ್ಕೆ ಅವರ ಅನೇಕ ಪತ್ರಗಳು ಸಾಕ್ಷಿ ನುಡಿಯುತ್ತವೆ. ಶ್ರೀದೇವರ ಅನುಗ್ರಹದ ಮಾತು ಪತ್ರಗಳ ಕೊನೆಯಲ್ಲಿ ಬರುತ್ತಲೇ ಇದ್ದಾಗ, ಅದೊಂದು ಮಾಮೂಲಿಯ ವಾಕ್ಯ ಎಂದೆನಿಸಿದರೂ, ಅದನ್ನು ಅವರು ಆತ್ಮಸಾತ್ ಮಾಡಿಕೊಂಡೇ ಹಾಗೆ ಹೇಳುತ್ತಿದ್ದರು.

* * *

ಪೈಯವರ ಪತ್ರಗಳ ಒಟ್ಟಿನ ಅವಲೋಕನದಿಂದ, ಅವರ ಪ್ರಾಮಾಣಿಕತೆ, ಅಹಂಕಾರವಿಲ್ಲದ ಆತ್ಮಾಭಿಮಾನ, ಅಭಿಪ್ರಾಯ ಸ್ಪಷ್ಟತೆ, ಹಿರಿ - ಕಿರಿಯ, ಪರಿ ಚಿತ - ಅಪರಿಚಿತ ಎಂಬ ಭೇದವಿಲ್ಲದ ಸಹಾಯ ತತ್ಪರತೆ - ಈ ಗುಣಗಳು ನಿಚ್ಚಳವಾಗಿ ತೋರಿಬರುತ್ತವೆ. ಇಷ್ಟೇ; ಸಾಹಿತ್ಯಿಕರ ಇಂಥ ಪತ್ರಗಳ ಪ್ರಕಟನೆ

ಯಲ್ಲಿ ಅವರ ವಿಚಾರಧಾರೆಯನ್ನೂ, ಬರಹದ ಪ್ರೇರಣೆಗಳನ್ನೂ ತಿಳಿಯುವ ಉದ್ದೇಶವಿರುತ್ತಿದ್ದು ಅದಿಲ್ಲಿ ಕೈಗೂಡಿಲ್ಲ. ಏನಿದ್ದರೂ ರಾಜರತ್ನಂ ಪ್ರಕಟಿತ ಹಾಗೂ ಈಗ ಪ್ರಕಟವಾಗುತ್ತಿರುವ ಸಂಕಲನಗಳು ಪತ್ರಸಾಹಿತ್ಯದ ಪ್ರಯೋಜನ ದತ್ತ ಗಮನವನ್ನು ಸೆಳೆಯಬಲ್ಲ ಪ್ರಥಮ ಪ್ರಯತ್ನಗಳಾಗಿವೆ – ಎಂಬುದೇ ಈ ಎತ್ತುಗಡೆಯ ಸಾರ್ಥಕ್ಯ.

ಶ್ರೀನಿವಾಸ ಹಾವನೂರ

# ಪತ್ರಗಳ ಪರಿವಿಡಿ
(ಕಾಲಾನುಕ್ರಮದಲ್ಲಿ)

| ಕ್ರಮಾಂಕ | ದಿನಾಂಕ | ಯಾರಿಗೆ ಬರೆದದ್ದು |
|---|---|---|
| ೧ | ೨೦-೧೦-೧೯೩೦ | ಜಿ. ಎನ್. ಲಕ್ಷ್ಮಣ ಪೈ |
| ೨ | ೨೬-೧೨-೧೯೩೦ | ” |
| ೩ | ೩೧- ೩-೧೯೩೩ | ” |
| ೪ | ೧೮- ೨-೧೯೩೬ | ಸೇಡಿಯಾಪು ಕೃಷ್ಣಭಟ್ಟ |
| ೫ | ೨೭- ೯-೧೯೩೬ | ಜಿ. ಎನ್. ಲಕ್ಷ್ಮಣ ಪೈ |
| ೬ | ೮- ೧-೧೯೩೮ | ” |
| ೭ | ೨೬-೧೧-೧೯೩೯ | ” |
| ೮ | ೧೫-೧೨-೧೯೩೯ | ವೆಂ. ಭೀ. ಲೋಕಾಪುರ |
| ೯ | ೭- ೧-೧೯೪೦ | ” |
| ೧೦ | ೧೧- ೮-೧೯೪೫ | ಉಗ್ರಾಣ ಮಂಗೇಶರಾವ |
| ೧೧ | ೩೦- ೮-೧೯೪೫ | ” |
| ೧೨ | ೨- ೯-೧೯೪೫ | ” |
| ೧೩ | ೧೬- ೩-೧೯೪೭ | ಅಮ್ಮೆಂಬಳ ಶಂಕರನಾರಾಯಣ ನಾವಡ |
| ೧೪ | ೧೩- ೪-೧೯೪೭ | ” |
| ೧೫ | ೧೩- ೪-೧೯೪೭ | ” |
| ೧೬ | ೧೧- ೮-೧೯೪೭ | ” |
| ೧೭ | ೯-೧೦-೧೯೪೭ | ” |
| ೧೮ | ೨೦- ೧-೧೯೪೮ | ” |
| ೧೯ | ೨೧- ೧-೧೯೪೮ | ಸೇಡಿಯಾಪು ಕೃಷ್ಣಭಟ್ಟ |

| | | |
|---|---|---|
| ೨೦ | ೧೭– ೪–೧೯೪೯ | [ಓರ್ವ ಡಾಕ್ಟರರಿಗೆ] |
| ೨೧ | ೧೭–೧೦–೧೯೪೯ | ಸದಾನಂದ ನಾಯಕ |
| ೨೨ | ೧೯–೧೦–೧೯೪೯ | ಅಮ್ಮೆಂಬಳ ಶಂಕರನಾರಾಯಣ ನಾವಡ |
| ೨೩ | ೨೩–೧೧–೧೯೪೯ | ಸದಾನಂದ ನಾಯಕ |
| ೨೪ | ೨೮– ೬–೧೯೫೦ | ಅಮ್ಮೆಂಬಳ ಶಂಕರನಾರಾಯಣ ನಾವಡ |
| ೨೫ | ೨೧– ೪–೧೯೫೧ | ಮಾಸ್ತಿ ವೆಂಕಟೇಶ ಅಯ್ಯಂಗಾರ್ |
| ೨೬ | ೧೨– ೧–೧೯೫೨ | ಸಮೇತನಹಳ್ಳಿ ರಾಮರಾಯ |
| ೨೭ | ೨೧– ೧–೧೯೫೨ | ಅಮ್ಮೆಂಬಳ ಶಂಕರನಾರಾಯಣ ನಾವಡ |
| ೨೮ | ೨೫– ೧–೧೯೫೨ | ರಂ. ಶ್ರೀ. ಮುಗಳಿ |
| ೨೯ | ೨೫– ೩–೧೯೫೨ | ,, |
| ೩೦ | ೯– ೬–೧೯೫೨ | ಮುನಿಪಾಲ ರಾಜು |
| ೩೧ | ೧೨– ೬–೧೯೫೨ | ಅಮ್ಮೆಂಬಳ ಶಂಕರನಾರಾಯಣ ನಾವಡ |
| ೩೨ | ೨– ೯–೧೯೫೨ | ಕು. ಶಿ. ಹರಿದಾಸ ಭಟ್ಟ |
| ೩೩ | ೧೭– ೯–೧೯೫೨ | ರಂ. ಶ್ರೀ. ಮುಗಳಿ |
| ೩೪ | ೨೧– ೧–೧೯೫೩ | ಮುನಿಪಾಲ ರಾಜು |
| ೩೫ | ೧೫– ೨–೧೯೫೩ | ಕಾರ್ಯದರ್ಶಿ, 'ತರುಣ ಕಲಾವೃಂದ' |
| ೩೬ | ೧೮– ೩–೧೯೫೩ | ಮುನಿಪಾಲ ರಾಜು |
| ೩೭ | ೬–೧೧–೧೯೫೩ | ಕು. ಶಿ. ಹರಿದಾಸ ಭಟ್ಟ |
| ೩೮ | ೭–೧೨–೧೯೫೩ | ಜಿ. ಎನ್. ಲಕ್ಷ್ಮಣ ಪೈ |
| ೩೯ | ೯– ೨–೧೯೫೪ | ಆರ್. ಎನ್. ಮೂರ್ತಿ |
| ೪೦ | ೧೪– ೩–೧೯೫೪ | ಮುನಿಪಾಲ ರಾಜು |
| ೪೧ | ೨೮– ೪–೧೯೫೪ | ಶಂಕರನಾರಾಯಣ ಭಟ್ಟ (ಮಿತ್ತೂರು) |
| ೪೨ | ೨೧– ೫–೧೯೫೪ | ಮುನಿಪಾಲ ರಾಜು |
| ೪೩ | ೧೦– ೭–೧೯೫೪ | ಆರ್. ಎನ್. ಮೂರ್ತಿ |
| ೪೪ | ೧೯– ೮–೧೯೫೪ | ಅಮ್ಮೆಂಬಳ ಶಂಕರನಾರಾಯಣ ನಾವಡ |
| ೪೫ | ೧– ೯–೧೯೫೪ | ಶಂಕರನಾರಾಯಣ ಭಟ್ಟ (ಮಿತ್ತೂರು) |
| ೪೬ | ೪– ೨–೧೯೫೫ | ಸಮೇತನಹಳ್ಳಿ ರಾಮ ರಾಯ |
| ೪೭ | ೩– ೩–೧೯೫೫ | ಎನ್. ಎ. ಶೀನಪ್ಪ ಹೆಗ್ಗಡೆ |
| ೪೮ | ೨೩– ೫–೧೯೫೫ | ಕೆ. ರಾಮಕೃಷ್ಣ ಸೋಮಯಾಜಿ |
| ೪೯ | ೨೧– ೬–೧೯೫೫ | ಜಿ. ಎನ್. ಲಕ್ಷ್ಮಣ ಪೈ |
| ೫೦ | ೮– ೮–೧೯೫೫ | ವರದರಾಜ ಹುಯಿಲಗೋಳ |

| | | |
|---|---|---|
| ೫೧ | ೨೬– ೮–೧೯೫೫ | ಎನ್. ಎ. ಶೀನಪ್ಪ ಹೆಗ್ಗಡೆ |
| ೫೨ | ೧– ೯–೧೯೫೫ | ಆರ್. ಎನ್. ಮೂರ್ತಿ |
| ೫೩ | ೪– ೯–೧೯೫೫ | ಡಿ. ಪುಟ್ಟಸ್ವಾಮಿ |
| ೫೪ | ೧೯– ೧–೧೯೫೬ | ಆರ್. ಎನ್. ಮೂರ್ತಿ |
| ೫೫ | ೨– ೩–೧೯೫೬ | „ |
| ೫೬ | ೫– ೪–೧೯೫೬ | ಅನಂತರಾವ ಕೆ. ಭೋಸಗೆ |
| ೫೭ | ೧೬– ೫–೧೯೫೬ | ಕೆ. ಎನ್. ಭಟ್ಟ ಶಿರಾಡಿಪಾಲ |
| ೫೮ | ೧೩– ೭–೧೯೫೬ | ಎನ್. ಎ. ಶೀನಪ್ಪ ಹೆಗ್ಗಡೆ |
| ೫೯ | ೨೨– ೭–೧೯೫೬ | „ |
| ೬೦ | ೯– ೮–೧೯೫೬ | „ |
| ೬೧ | ೧೬– ೮–೧೯೫೬ | „ |
| ೬೨ | ೧– ೯–೧೯೫೬ | ಅ. ಬಾಲಕೃಷ್ಣಶೆಟ್ಟಿ, ಪೊಳಲಿ |
| ೬೩ | ೧೪– ೯–೧೯೫೬ | ಅಮ್ಮೆಂಬಳ ಶಂಕರನಾರಾಯಣ ನಾವಡ |
| ೬೪ | ೧೫– ೯–೧೯೫೬ | ಜಿ. ಎನ್. ಲಕ್ಷ್ಮಣ ಪೈ |
| ೬೫ | ೨೪– ೯–೧೯೫೬ | ಕೆ. ಎನ್. ಭಟ್ಟ ಶಿರಾಡಿಪಾಲ |
| ೬೬ | ೨೭– ೯–೧೯೫೬ | ಅಮ್ಮೆಂಬಳ ಶಂಕರನಾರಾಯಣ ನಾವಡ |
| ೬೭ | ೧–೧೧–೧೯೫೬ | ಬೈಕಾಡಿ ವೆಂಕಟಕೃಷ್ಣರಾವ |
| ೬೮ | ೧೫–೧೧–೧೯೫೬ | „ |
| ೬೯ | ೧೧–೧೨–೧೯೫೬ | ಅಮ್ಮೆಂಬಳ ಶಂಕರನಾರಾಯಣ ನಾವಡ |
| ೭೦ | ೮– ೧–೧೯೫೭ | ಬೈಕಾಡಿ ವೆಂಕಟಕೃಷ್ಣರಾವ |
| ೭೧ | ೧೩– ೧–೧೯೫೭ | „ |
| ೭೨ | ೯– ೭–೧೯೫೭ | ಅಮ್ಮೆಂಬಳ ಶಂಕರನಾರಾಯಣ ನಾವಡ |
| ೭೩ | ೨– ೮–೧೯೫೭ | ಮಾಸ್ತಿ ವೆಂಕಟೇಶ ಅಯ್ಯಂಗಾರ್ |
| ೭೪ | ೯– ೯–೧೯೫೭ | ರಂ. ಶ್ರೀ. ಮುಗಳಿ |
| ೭೫ | ೧೮–೧೦–೧೯೫೭ | ಕ. ಮ. ಶಿ. ಚಂದ್ರಶೇಖರಯ್ಯ |
| ೭೬ | ೨೦– ೨–೧೯೫೮ | ಮುನಿಪಾಲ ರಾಜು |
| ೭೭ | ೨೭– ೨–೧೯೫೮ | ದು. ನಿಂ. ಬೆಳಗಲಿ |
| ೭೮ | ೧೧– ೪–೧೯೫೮ | ಉಗ್ರಾಣ ಮಂಗೇಶರಾವ |
| ೭೯ | ೧೧– ೬–೧೯೫೮ | ಎನ್. ಎ. ಶೀನಪ್ಪ ಹೆಗ್ಗಡೆ |
| ೮೦ | ೧೬– ೬–೧೯೫೮ | „ |
| ೮೧ | ೧೩– ೮–೧೯೫೮ | ಬಿ. ಟಿ. ರಂಗಸ್ವಾಮಿ |

೮೨ ೨೪- ೯-೧೯೫೮ ಬೈಕಾಡಿ ವೆಂಕಟಕೃಷ್ಣರಾವ

೮೩ ೨೬-೧೦-೧೯೫೮ ಎ. ಎ. ಶೆಣಾಯಿ

೮೪ ೧೯- ೨-೧೯೫೯ ಎಸ್. ಎಲ್. ನಾರಾಯಣ ಭಟ್ಟ

೮೫ ೨೪- ೩-೧೯೫೯ ಬೈಕಾಡಿ ವೆಂಕಟಕೃಷ್ಣರಾವ

೮೬ ೨೭- ೩-೧೯೫೯ ,,

೮೭ ೭- ೪-೧೯೫೯ ,,

೮೮ ೧೮- ೫-೧೯೫೯ ,,

೮೯ ೨೯- ೯-೧೯೫೯ ಎಸ್. ಎಂ. ಶೆಟ್ಟಿ, ಶಿಮುಂಜೆ ಪರಾರಿ

೯೦ ೨೦-೧೧-೧೯೫೯ ಬೈಕಾಡಿ ವೆಂಕಟಕೃಷ್ಣರಾವ

೯೧ ೯-೧೨-೧೯೫೯ ಜಿ. ಎನ್. ಲಕ್ಷ್ಮಣ ಪೈ

೯೨ ೨೯-೧೨-೧೯೫೯ ಕೆ. ಗೋಪಾಲರಾವ

೯೩ ೧೫- ೧-೧೯೬೦ ಏರ್ಯ ಲಕ್ಷ್ಮೀನಾರಾಯಣ ಆಳ್ವ

೯೪ ೧೦- ೩-೧೯೬೦ ಎಂ. ವಾಸುದೇವರಾವ

೯೫ ೧೨- ೩-೧೯೬೦ ಅಮ್ಮೆಂಬಳ ಶಂಕರನಾರಾಯಣ ನಾವಡ

೯೬ ೧- ೪-೧೯೬೦ ಕೆ. ವೆಂಕಟ್ರಾಯಾಚಾರ್

೯೭ ೮- ೪-೧೯೬೦ ಆರ್. ಎನ್. ಮೂರ್ತಿ

೯೮ ೯- ೯-೧೯೬೦ ಸಮೇತನಹಳ್ಳಿ ರಾಮರಾಯ

೯೯ ೨೭- ೯-೧೯೬೦ ಪಿ. ಗುರುರಾಜ ಭಟ್ಟ

೧೦೦ ೨೩- ೨-೧೯೬೧ ಪ. ನಾಗರಾಜಯ್ಯ

೧೦೧ ೨೧- ೪-೧೯೬೧ ಎನ್. ಶೇಷಗಿರಿ ಪೈ

೧೦೨ ೨೨- ೪-೧೯೬೧ ,,

೧೦೩ ೧೪- ೭-೧೯೬೧ ಬೈಕಾಡಿ ವೆಂಕಟಕೃಷ್ಣರಾವ

೧೦೪ ೧೯- ೭-೧೯೬೧ ರಾಮಚಂದ್ರ ಉಚ್ಚಿಲ್

೧೦೫ ೪- ೯-೧೯೬೧ ಎನ್. ಎ. ಶೀನಪ್ಪ ಹೆಗ್ಗಡೆ

೧೦೬ ೧೨- ೯-೧೯೬೧ ಬೈಕಾಡಿ ವೆಂಕಟಕೃಷ್ಣರಾವ

೧೦೭ ೨೩-೧೦-೧೯೬೧ ,,

೧೦೮ ೧೩-೧೧-೧೯೬೧ ಎಸ್. ಎಮ್. ಶೆಟ್ಟಿ ಶಿಮುಂಜೆ ಪರಾರಿ

೧೦೯ ೧೨-೧೨-೧೯೬೧ ಬೈಕಾಡಿ ವೆಂಕಟಕೃಷ್ಣರಾವ

೧೧೦ ೧೮-೧೨-೧೯೬೧ ,,

೧೧೧ ೩೧-೧೨-೧೯೬೧ ರಾಮು ಮೊಳೆಯಾರ

೧೧೨ ೪- ೩-೧೯೬೨ ಕೆ. ವೆಂಕಟ್ರಾಯಾಚಾರ್

| | | |
|---|---|---|
| ೧೧೩ | ೧೨– ೩–೧೯೬೨ | ಕೆ. ವೆಂಕಟ್ರಾಯಾಚಾರ್ |
| ೧೧೪ | ೨೧– ೩–೧೯೬೨ | " |
| ೧೧೫ | ೨೨– ೩–೧೯೬೨ | ಕೆ. ಎನ್. ಭಟ್ಟ ಶಿರಾಡಿಪಾಲ |
| ೧೧೬ | ೨೭– ೩–೧೯೬೨ | ಕೆ. ವೆಂಕಟ್ರಾಯಾಚಾರ್ |
| ೧೧೭ | ೨೯– ೩–೧೯೬೨ | ವಿಜಯನಾಥ ಶೆಣಾಯಿ |
| ೧೧೮ | ೩೦– ೪–೧೯೬೨ | ವೆ. ಗುರುರಾಜ ಭಟ್ಟ |
| ೧೧೯ | ೮– ೬–೧೯೬೨ | ಕೆ. ಶಿವರಾಮ ಕಾರಂತ |
| ೧೨೦ | ೭– ೮–೧೯೬೨ | ಮಂ. ಜಾರಪ್ಪ |
| ೧೨೧ | ೧೭– ೮–೧೯೬೨ | ವೈಕುಂಠ ಬಂಟ್ವಾಳಕರ |
| ೧೨೨ | ೧೯– ೮–೧೯೬೨ | ಶ್ರೀನಿವಾಸ ಹಾವನೂರ |
| ೧೨೩ | ೨೮– ೮–೧೯೬೨ | ವೈಕುಂಠ ಬಂಟ್ವಾಳಕರ |
| ೧೨೪ | ೩–೧೦–೧೯೬೨ | ಕೆ. ವೆಂಕಟ್ರಾಯಾಚಾರ್ |
| ೧೨೫ | ೨೩– ೩–೧೯೬೩ | ಮ. ವಿ. ನಾಯಕ |
| ೧೨೬ | ೨೭– ೪–೧೯೬೩ | ಸಂಪಾದಕರು 'ಚೇತನ ಸ್ಫೂರ್ತಿ' |
| ೧೨೭ | ೧– ೫–೧೯೬೩ | ಮೈಸೂರು ವಿಶ್ವವಿದ್ಯಾನಿಲಯ |
| ೧೨೮ | ೧೭– ೬– ? | ಬಿ. ದಾಮೋದರ ಬಾಳಿಗ |

**ಅನುಬಂಧ**

| | | |
|---|---|---|
| ೧೨೯ | ೩– ೧–೧೯೩೫ | ಕೆ. ವಾಮನ ಭಟ್ಟ |
| ೧೩೦ | ೨೩– ೭–೧೯೬೧ | ಕುಕ್ಕಿಲ್ ಕೃಷ್ಣ ಭಟ್ಟ |

———

೧

**ಜಿ. ಎನ್. ಲಕ್ಷ್ಮಣ ಪೈ** (ಪುತ್ತೂರು *) ೨೦-೧೧-೩೦

ಗೋವಿಂದ ಪೈಯ ವಿಜ್ಞಾಪನೆ. ತಾವು ಅತ್ಯಂತ ಪ್ರೀತಿಪೂರ್ವಕವಾಗಿ ಕಳಿಸಿರುವ 'ಕೀರ್ತನಾಂಜಲಿ'ಯೂ ಅದರೊಂದಿಗೆ ಬರೆದಿರುವ ಕಾರ್ಡೂ ನಿನ್ನೆ ತಲುಪಿದವು. ಆ ಬಗ್ಗೆ ತುಂಬ ಧನ್ಯವಾದಗಳು. ಕವಿತೆಗಳು ಬಲು ಚಲೋದಾಗಿವೆ – ಭಕ್ತಿಯಿಂದ ತುಳುಕುತ್ತಲಿವೆ. ಎದೆ ತುಳುಕಿಸುತ್ತಲಿವೆ. ಇವು ಓದುವವರ ಸಾಧನೆ ಆರಾಧನೆಗಳಿಗೆ ಉಪಕಾರಿಯಾಗಲೆಂದೂ, ಕನ್ನಡಿಗರ ಆದರಕ್ಕೆ ಪಾತ್ರವಾಗಲೆಂದೂ ಹಾರೈಸುತ್ತೇನೆ.

ಹರಸುವಾತನು ದೇವರಲ್ಲದೆ ನಾನಲ್ಲ. ಆದರೆ, ಇದೊಂದು ಮಾತನ್ನು ಹೇಳುವೆನು – ಶ್ರೀದೇವರು ತಮ್ಮಿಂದ ಇನ್ನೂ ಉತ್ಕೃಷ್ಟವಾದ ಕವಿತೆಗಳನ್ನು ಹೊರಹೊಮ್ಮಿಸಲಿ ಇದೇ ನನ್ನ ಪ್ರಾರ್ಥನೆ. ಇದೇ ನನ್ನ ಮಾತು.

ಇತಿ ನಮಸ್ಕಾರ

೨

**ಜಿ. ಎನ್. ಲಕ್ಷ್ಮಣ ಪೈ** (ಪುತ್ತೂರು) ೨೬-೧೨-೩೦

ಗೋವಿಂದ ಪೈ ಮಾಡುವ ನಮಸ್ಕಾರ.
ತಾವು ಪ್ರೀತಿಪೂರ್ವಕವಾಗಿ ಕಳುಹಿಸಿಕೊಟ್ಟಿರುವ 'ಕನ್ನಡ ಪದ್ಯರತ್ನಾವಳಿ' (ಪ್ರಥಮ ಭಾಗ)ಯ ಪ್ರತಿ ಇಂದು ಮುಟ್ಟಿತು. ಆ ಬಗ್ಗೆ ಕೃತಜ್ಞನಾಗಿರುತ್ತೇನೆ. ಇದರಲ್ಲಿಯ ಪದ್ಯಗಳು ಶಾಲೆಯ ಮಕ್ಕಳ ಪಾಠಕ್ಕೆ ಯೋಗ್ಯವಾಗಿವೆ. ಅವರ ಮೆಚ್ಚಿಗೆಗೂ ಕಲಿಯುವಿಕೆಗೂ ತಕ್ಕವಾಗಿವೆ. ಅವರು ಇವನ್ನು ಅಭಿರುಚಿಯಿಂದ ಕಲಿಯುವರು ಎಂಬಲ್ಲಿಯೂ, ಅಂತಹ ಅಭಿರುಚಿಯನ್ನು ಉಪಾಧ್ಯಾಯರು ಸುಲಭವಾಗಿ ಉಂಟುಮಾಡಬಲ್ಲರು ಎಂಬಲ್ಲಿಯೂ ಸಂಶಯ ಕಾಣದು. ಈ ರತ್ನಾವಳಿಯ ಇನ್ನು ಮುಂದಣ ಭಾಗಗಳು ಇದಕ್ಕಿಂತ ಸೊಗಸಾಗಿರಲಿ ಎಂದೂ, ಈ ಭಾಗಕ್ಕೆ ಯಥಾಹರವಾದ ಪ್ರೋತ್ಸಾಹ ದೊರೆಯಲೆಂದೂ ಹಾರೈಸುತ್ತೇನೆ.

ಇತಿ ನಮಸ್ಕಾರ

---

* ಪತ್ರಗಳನ್ನು ಪಡೆದವರು ಆ ಕಾಲಕ್ಕೆ ಯಾವ ಊರಲ್ಲಿದ್ದರೋ ಆ ಊರನ್ನೇ ಕಾಣಿಸಲಾಗಿದೆ.

೩

**ಜಿ. ಎನ್. ಲಕ್ಷ್ಮಣ ಪೈ** (ಪುತ್ತೂರು) ೩೧–೩–೩೩

Dear Mr. Pai,

Many thanks for your '**ಅಭಿನಯ ಗೀತಾವಳಿ**' a copy of which, so kindly sent by you, received here today. All the songs are good and quite suitable to the need of the children for whom they are intended. I am sure these songs will be taught in all our schools. The children will enjoy them. My congratulations to you.

Yours sincerely

೪

**ಸೇಡಿಯಾಪು ಕೃಷ್ಣ ಭಟ್ಟ** (ಮಂಗಳೂರು) ೨೮-೨-೧೯೩೬

ಗೋವಿಂದ ಪೈ ಮಾಡುವ ನಮಸ್ಕಾರ.

ತಾವು ಸ್ನೇಹಪೂರ್ವಕವಾಗಿ ಕಳುಹಿಸಿಕೊಟ್ಟಿರುವ ತಮ್ಮ "ಶ್ವಮೇಧ" ಎಂಬ ಕವಿತೆಯು ಪ್ರತಿ ಮೊನ್ನೆ ಕೈ ಸೇರಿ ಅದನ್ನು ಓದಿ ನೋಡಿದೆ. ಕವಿತೆ ಬಹಳ ಸೊಗಸಾಗಿದೆ. ಹಳ್ಳಿಯ ಮನೆವಾರ್ತೆಯು ಈ ಕತೆಗೆ ತಕ್ಕ ಮನೆವಾರ್ತೆಯ ಮಾತುಗಳು, ಮನೆವಾರ್ತೆಯವೇ ಅಲಂಕಾರಗಳು ಇದಕ್ಕೆ ಸಾಹಜಿಕವಾಗಿ ಹೊಂದಿಕೆಯಾಗಿವೆ. ಅಷ್ಟು ನೇರಾಗಿ ಅಚ್ಚುಕಟ್ಟಾಗಿವೆ. ಮೊಗಕಾಣುವಷ್ಟು ತಿಳಿಯ ಹರಿತದಿಂದ ಸಾಗುತ್ತಿರುವ ಶೈಲಿಯನ್ನು ಕುರಿತು ಹೀಗೆ ಹಾಗೆಂದು ತಿದ್ದತಕ್ಕ ಮಾತುಗಳು ಇದ್ದಾವೆಂದು ನನಗೆ ತೋರುವುದಿಲ್ಲ. ಇದು ಓದತಕ್ಕ ಕವಿತೆ, ಓದಿ ಮೆಚ್ಚತಕ್ಕ ಕವಿತೆ, ಮೆಚ್ಚಿ ಓದತಕ್ಕ ಕವಿತೆ. ಇದನ್ನು ತಾವು ಕನ್ನಡಿಗರಿಗೆ ನೀಡಿರುವ, ದೇವರು ತಮ್ಮಿಂದ ನೀಡಿಸಿರುವ ಬಗ್ಗೆ, ತಮ್ಮನ್ನು ಅಭಿನಂದಿಸುತ್ತೇನೆ; ಆತನಿಗೆ ಧನ್ಯವಾದಗಳನ್ನು ಸಮರ್ಪಿಸುತ್ತೇನೆ. ತಾವೆಂದಿರುವ ಮೇರೆಗೆ ಇದು ಕ್ಷುದ್ರ ಕಾವ್ಯವಲ್ಲ - ಚಿಕ್ಕದೆಂಬ ಕಾರಣದಿಂದ ಹಾಗೆಂದಿರುವಿರಾದರೆ, 'ಕ್ಷುದ್ರ' ಎಂಬ ಪೂರ್ವಪದವು ಆ ಅರ್ಥದಲ್ಲಿ ಇದಕ್ಕೆ ತೀರ ಅನುಚಿತವೇ ಸರಿ ; ಈ ಕವಿತೆಯ ಯೋಗ್ಯತೆಯ ದೃಷ್ಟಿಯಿಂದ ಆ ಗುಣವಾಚಿ ಇದಕ್ಕೆ ಅಸಮಂಜಸವೇ ಸರಿ. ಹಳ್ಳಿಯ ಬಾಳನ್ನು ಬಣ್ಣಿಸುವ ಈ ಕವಿತೆಗೆ 'ಶ್ವಮೇಧ' ಎಂಬ ಅಷ್ಟೊಂದು ದೊಡ್ಡ ಹೆಸರಾದರೂ ಕಿವಿಗಿಂತ ಓಲೆ ಗಾತ್ರವೆಂಬಂತೆ ತೋರುತ್ತದೆ. ಹೀಗೆಂಬುದರಿಂದ ಆ ಹೆಸರನ್ನು ತೊರೆದುಬಿಡಬೇಕೆಂದು ಹೇಳುವವನಲ್ಲ. ನನಗೆ ತೋರಿದುದನ್ನು ಹೇಳಿರುವೆನಷ್ಟೆ. ದಯಮಾಡಿ ಬೇಸರಿಸ

ಲಾಗದು. ಶ್ರೀದೇವರು ತಮ್ಮಿಂದ ಇತೋಪ್ಯಧಿಕವಾಗಿ ಸೊಗಸಾಗಿರುವ ಕವಿತೆಗಳನ್ನು ಬರೆಯಿಸಲೆಂದು ಪ್ರಾರ್ಥಿಸುತ್ತೇನೆ.

ಇತಿ ನಮಸ್ಕಾರ

೫

**ಜಿ. ಎನ್. ಲಕ್ಷ್ಮಣ ಪೈ** (ಪುತ್ತೂರು) ೨೬-೯-೩೬

ಗೋವಿಂದ ಪೈ ಮಾಡುವ ನಮಸ್ಕಾರ.

ತಾವು ಪ್ರೀತಿಪೂರ್ವಕವಾಗಿ ಕಳುಹಿಸಿದ ತಮ್ಮ 'ದಾಮಾಜಿಪಂತ' ನಾಟಕದ ಪ್ರತಿ ಕೈ ಸೇರಿ ಆ ಬಗ್ಗೆ ತಮಗೆ ತುಂಬಾ ಕೃತಜ್ಞನಾಗಿರುತ್ತೇನೆ.

ನಾಟಕವು ಸೊಗಸಾಗಿದೆ. ಈಗಣ ಹೊಸ ನಾಟಕಗಳಿಗೆ ಇದು ಬಣ್ಣದಲ್ಲಿ ಲೇಶವೂ ಕಡಿಮೆಯಾಗಿಲ್ಲ. ಈ ಬಗ್ಗೆ ತಮ್ಮನ್ನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ.

ಇದರ ರಚನೆಯನ್ನು ಕುರಿತು ನನಗೆ ಸಾಕೂತವೆನಿಸುವೊಂದು ಸೂಚನೆಯನ್ನು ಮಾಡುವುದಾದರೆ, ಇದರ ಪದ್ಯಭಾಗವು ತೀರ ಹಾಡುಗಳೇ ಆಗಿರುವುದರಿಂದ ಇದು ಈಗ ಪ್ರಾಯಶಃ ರಂಗಭೂಮಿಗೆ ಮಾತ್ರ ಅಥವಾ ಮನೆಗಳಲ್ಲಿಯ ಸಂಜೆಯ ಕೂಟಗಳಿಗೂ, ಒಪ್ಪುವಂತೆ, ಆ ಹಾಡುಗಳನ್ನು ಕದಲಿಸದೆ ಅವುಗಳ ಜತೆಯಲ್ಲಿ ಅವಕ್ಕೆ ಸರಿಯಾಗಿ ಹಿಂದಿನ ಅಥವಾ ಇಂದಿನ ಮಾದರಿಯ ಆಯಾ ಛಂದಸ್ಸುಗಳಲ್ಲಿ ಪದ್ಯಗಳನ್ನು ರಚಿಸಿ ಇದರಲ್ಲಿ ಸೇರಿಸಿಬಿಟ್ಟರೆ ಇದು ವಿದ್ವಾಂಸರಿಗೆ ಓದಲಿಕ್ಕೂ ಶಾಲೆಗಳಲ್ಲಿ ಕಲಿಸಲಿಕ್ಕೂ ಬೇಕಾದಷ್ಟು ಯೋಗ್ಯವಾಗುವುದೆಂದು ಹೇಳಬಹುದು. ಆದರೆ ನಾನು ಹೇಳಿದೆನೆಂದು ತಾನೆ ತಾವು ಹೀಗೆ ಮಾಡಲಾಗದು ; ತಮ್ಮ ಸಾಹಿತ್ಯ ದೃಷ್ಟಿಗೂ ಇದು ಸರಿ ಎಂದೆನಿಸಿದರೆ ಮಾತ್ರ ಮಾಡಬಹುದು.

ಇಂತಹ ಹಾಗೂ ಇದಕ್ಕೆ ಮೇಲಾದ ಕೃತಿಗಳನ್ನು ರಚಿಸುವಂತೆ ದೇವರು ತಮ್ಮನ್ನು ಅನುಗ್ರಹಿಸಲಿ ಎಂದು ಹಾರೈಸುತ್ತೇನೆ.

ಇತಿ ನಮಸ್ಕಾರ

೬

**ಜಿ. ಎನ್. ಲಕ್ಷ್ಮಣ ಪೈ** (ಪುತ್ತೂರು) ೮-೧-೧೯೩೮

Dear Mr. Pai

Many thanks for the kind copy of your ದಸರೆಯ ಕಾಣಿಕೆ to have yesterday.

Both the poems, ಅಮರ ಲೋಕ and ಯದ್ವಾ ತದ್ವಾ in it are very good, each beautiful in its own way, and they provide a pleasant reading. I congratulate you as having produced and published them.

Thanking you once again for your kind favour.

I am

Sincerely yours,

೭

ಜಿ. ಎನ್. ಲಕ್ಷ್ಮಣ ಪೈ (ಪುತ್ತೂರು) ೨೬-೧೧-೩೯

Dear Mr. Pai,

Many thanks for the copy of your ಶಿಶುಗೀತಮಾಲೆ which you have so kindly sent me.

I have read it with pleasure. All the poems in it are excellent and very well suited to the needs and tastes of the school-children for whom it is meant. I am sure it will soon be in use in all the elementary schools in our district and be popular among the children. I congratulate you.

Your's sincerely

೮

ವೆಂ.ಭೀ. ಲೋಕಾಪುರ (ಬೆಳಗಾಂವಿ) ೧೫-೧೨-೩೯

Dear Sir,

I believe you are in due receipt of the last letter of the 21st October. Please excuse me for so long a delay in replying to your letter of the 10th Nov. All along, I have not been doing well.

(1) The poet Ranna (ರನ್ನ)speaks in his Ajitapuraan (ಅಜಿತ ಪುರಾಣ) [XII 42] composed in SS. 915=993 A.C. of having composed his two works before that date viz., Parashurama Puraan

(ಪುರಶುರಾಮ ಪುರಾಣ) and Chakreshwara Charite (ಚಕ್ರೇಶ್ವರ ಚರಿತೆ). And so I have said in the last letter. I have already made it clear enough that the Chakreswara Charite (ಚಕ್ರೇಶ್ವರ ಚರಿತೆ) is never the same as Gadayuddha (ಗದಾಯುದ್ಧ), in as much as it is a Jain religious poem dealing with the story of the mythical Jaina Chakreshwara Bharat (ಭರತ), son of the first Theerthankar Rushabhanath (ಋಷಭನಾಥ). That article of these appeared in the Desharanjana (ದೇಶರಂಜನ) of Mangalore in its 2 issues of February and April 1932. The Journal became extinct within some 6 months of its publication and I very much regret I have not got a single copy to spare. Gadayuddha (ಗದಾಯುದ್ಧ) which has thus been not mentioned in the Ajita Puraan (ಅಜಿತ ಪುರಾಣ) cannot have been composed before 993 A.C.

(2) In the Sogal plates (E. I. XVI. 1-9) of the 8th June 1078 A.C., the Western Chalukya King Tailapa has been spoken of as a Conqueror of Chola (ಚೋಳ) and Lala (ಲಾಳ) [33-34 on P.4] wherefore Konkan cannot have been conquered by them whether by himself or by his son Satyashraya (ಸತ್ಯಾಶ್ರಯ).

Fleet says (Kanarese Dynasties P.430 – 431) Tailapa cannot have acquired any of the Gujarat provinces; but since in the Sogal plates his conquest of Lala (ಲಾಳ), a portion of Gujarat, is mentioned and also in Gadayuddha (ಗದಾಯುದ್ಧ) [1.2. ವಚನ; II. 47] his conquest of Ghurjara (ಘೂರ್ಜರ) is spoken of, it is pretty certain he must have conquered and held some portion of it at least.

(3) The wording of the Bhadan Plates of 25th or 26th June 997 A. C. (E. I. III PP 267-276) is quite clear. The very mention of the Rashtrakuta (ರಾಷ್ಟ್ರ ಕೂಟ) genealogy in it and the nonmention of the Chalukya genealogy argue that Aparaditya was not (up to that year 997 A.C. at least) a feudatory of Tailapa, so that, it is not possible to agree with Fleet (Kanarese Dynasties PP 430) where he says that it indicates plenty that his (Tailpa's) supremacy was not

extended in the territory of the northern branch of the Shilahara family in the Konkan. If however Aparaditya is called Maha Samantadhipati (ಮಹಾಸಾಮಂತಾಧಿಪತಿ) and Maha Mandaleswara (ಮಹಾ ಮಂಡಲೇಶ್ವರ) (Kan. Dyn. PP.542) we shall do well to remember that the Western Gangas of Talakad all along called themselves Mahamandaleswara (ಮಹಾಮಂಡಲೇಶ್ವರ) even while they were independent and you have rightly referred to the late Justice K. T. Telang's view in a similar matter (in the present of your article sent to me). Besides it may also be noted in this connection that both titles, especially both of them together borne by a single ruler and it also will denote that he was an independent ruler.

(4) If in Gadayuddha [ (ಗದಾಯುದ್ಧ) 1. 2 ವಚನ) ] Tailapa is "Konkan Bhayankara" (ಕೊಂಕಣ ಭಯಂಕರ) it simply means that he was a terror to the king of Konkan and not that he had conquered the latter. He may have invaded Konkan once a year and have done some havoc there, but cannot at all [?] that he had conquered that King. Or since from the Khare patan grant of 1008 A. C. (Kan. Dyn. PP.433 and 536–'38) We know Rattaraja of the southern branch of the Shilaharas of Konkan was a feudatory of Satyashraya (ಸತ್ಯಾಶ್ರಯ) the successor of Tailapa. Possibly Satyashraya had achieved the conquest of southern Konkan (or Tailapa himself may have effected it) during Tailapa's reign. Therefore he may have been Konkan Bhayankara. In that case the Konkaneswar (ಕೊಂಕಣೇಶ್ವರ) spoken of in Gadayuddha [(ಗದಾಯುದ್ಧ) ll. 47] might have been the ruler of southern Konkan. For in Gadayuddha (I. 23-26) where Aparaditya is spoken of, he is not called Konkaneswara nor is Konkan mentioned in that context.

(5) In the Gadayuddha [ಗದಾಯುದ್ಧ I. 23-26] there is an unequivocal reference to Aparaditya (ಅಪರಾದಿತ್ಯ) and the name Anshunagar(ಅಂಶುನಗರ) in I. 25, (I believe the last line especially the latter part of it ಶಂತರ್ಣವಂ ಶಾರ್ಣವಂ is perhaps corrupt.) recalls to that the name ಹಂಸಮೇನನಗರ otherwise also called as ಅಂಜಮನ,

ಹಮ್ಯಮನ in the records of the Silaharas of Northern Konkan (Kan. Dyn. PP. 542-43) which makes it applicable to all, contain that the Aparaditya of Gadayuddha is none else than the Aparaditya of the Shilaharas of Northern Konkan. (this is ಹಂಸಮೇನನಗರ the modern Sanjan).

It is thus certain that there were wars between the Chalukyas and the Northern Shilaharas of Konkan whose ruler was Aparaditya and if the latter accepted the sovereignty of the former it was obviously after the date of Bhadan plates i.e. 997 A. C. And we know Tailapa died in that year so that Aparaditya, if he was a feudatory of the Chalukyas was so after the death of Tailapa i.e. during the reign of Satyashraya. Therefore Gadayuddha (ಗದಾಯುದ್ಧ) must have been composed after 997 A. C.

(6) Butthen there is no reference in Gadayuddha (ಗದಾಯುದ್ಧ) to the conquest achieved by Satyashraya over the Cholas whereas as a matter of fact, we know there were wars between Satyashraya and the Cholas and from the Hottur inscriptions of 1005 and 1006 A. C. (Kan. Dyn. P 433) and Historical Inscriptions of South India, PP. 57-58) Satyashraya seems to have become victorious. As such the composition of Gadayuddha will have to be placed between 997 A. C. and 1005 A. C.

In your letter you say that Mr. Rajapurohita says that Tailapa had conquered Saptakonkan (ಸಪ್ತ ಕೊಂಕಣ) before 978 A. C. on the authority of the Sogal plates. (E. I. XVI PP. 1-9). I can never make this on it ; for he is spoken no more than the conqueror of Chola, Lala and Ranakambha Kakkala (ರಣಕಂಭ ಕಕ್ಕಲ) i. e. Rashtrakuta. It is no use to argue where argument is of no use. Moreover Saptakonkan is that region lying in the west coast of India between the river Vaitarini (ವೈತರಿಣಿ) in the Thana District and the North Cape Comorin in the South, so that it included not only Konkan proper but also Gove (ಗೋವೆ) ಹೈವೆ (N. canara) ಆಳವಖೇಡ and ತೌಳವನಾಡು (S. Kanara) as well as Malabar District and

the states of Cochin and Travancore and nowhere have I found any authority to prove that Taila had conquered the Malabar country. Of course in some of the inscriptions he is said to have overcome the Kings of Chedi (ಚೇದಿ) Nepal (ನೇಪಾಳ) Utkal (ಉತ್ಕಲ) [Kan. Dyn. P. 431.] which we know to be pyre pyperbole and there is no doubt it is so with regard to Nepal at least; and his conquest of the Malabar country may well be said to be a similar one.

I may say at fine that I have not seen any of the articles of Mr. Rajapurohita or yourself (except the one of which you have kindly sent me as present) so I can say nothing pro or con. the statements made in the letter.

Please excuse me for this very long but unfortunately unavoidable delay in reply. Wishing you good speed in your work,

Yours,

ಟಿಪ್ಪಣಿ : ಶ್ರೀಲೋಕಾಪುರರು 'ಶಿಲಾಹಾರ ಅಪರಾದಿತ್ಯನು ಸೂರ್ವುಡಿ ತೈಲಪನ ಮಾಂಡಲಿಕನಿರಬಹುದೆ?' ಎಂಬ ಸಂಶಯುವನ್ನೂ 'ರನ್ನನ ಗದಾಯುದ್ಧವು ಸತ್ಯಾಶ್ರಯನ ಕಾಲಕ್ಕೆ (ಆವನ ತಂದೆ ತೈಲಪನ ಕಾಲಕ್ಕೆ ಅಲ್ಲ) ರಚಿತವಾಗಿರಬಹುದು' - ಎಂಬೆರಡು ಅಂಶಗಳನ್ನು ಪ್ರಸ್ತಾಪಿಸಿ ಅವರು ಬರೆದ ಪತ್ರಕ್ಕೆ ಪೈಗಳ ಉತ್ತರವಿದು.

ತಮ್ಮ ಉತ್ತರದಲ್ಲಿ ಎರಡನ್ನೂ ಅನುಮೋದಿಸಿದ ಮೇಲೆ, ಪೈಯವರೇ ವಿಸ್ತಾರ ವಾಗಿ ಈ ಕುರಿತು, ೧೯೪೦ರಲ್ಲಿ ಧಾರವಾಡದ ಕನ್ನಡ ಸಂಶೋಧನ ಸಂಸ್ಥೆಯ ಆಶ್ರಯದಲ್ಲಿ ಉಪನ್ಯಾಸವಿತ್ತಿದ್ದಾರೆ (ನೋ.-ಮೂರು ಉಪನ್ಯಾಸಗಳು).

೬

**ವೆಂ. ಭೀ. ಲೋಕಾಪುರ** (ಬೆಳಗಾಂವಿ) ೭-೧-೧೯೪೦

ಗೋವಿಂದ ಪೈ ಮಾಡುವ ನಮಸ್ಕಾರ.

ತಮ್ಮ ದಶಂಬರ ೨೦ನೆಯ ಪತ್ರವು ಯಥಾಕಾಲದಲ್ಲಿ ಕೈ ಸೇರಿದೆ. ಏತನ್ಮಧ್ಯೆ ನನ್ನೊಬ್ಬ ಸ್ನೇಹಿತರಿಂದ ಕ.ಸಾ.ಪ. ಪತ್ರಿಕೆಯ XXIV - ೭ನೆಯ ಸಂಚಿಕೆಯನ್ನು ಇಸಕೊಂಡು ಅದರಲ್ಲಿ ತಾವು ಗದಾಯುದ್ಧದ ಕಾಲ ನಿರ್ಣಯವನ್ನು ಕುರಿತು ಬರೆದ ಲೇಖನವನ್ನು ಓದಿ ಬಹಳ ಸಂತೋಷಪಟ್ಟೆ. ತಮ್ಮ ಅಭಿಪ್ರಾಯವು ಸರಿ. ಈಗ ನನಗೂ ಕೊನೆಗೊಮ್ಮೆ ಇದೇ ವಿಷಯದಲ್ಲಿ ಬರೆಯಬೇಕೆನಿಸುವದರಿಂದ ನಾನು ಗದಾಯುದ್ಧದ ಕಾಲ ನಿರ್ಣಯವನ್ನು ಪರಶುರಾಮಚರಿತೆ ಹಾಗೂ ಚಕ್ರೇಶ್ವರ ಚರಿತೆಗಳ ಕಥಾವಸ್ತುವೇ ಈ ಮೊದಲಾದ ವಿಷಯಗಳನ್ನು ಕುರಿತು ಬರೆಯತೊಡ

ಗಿರುತ್ತೇನೆ. ಬರೆದು ಮುಗಿಸುತ್ತಲೇ ತಮಗೆ ತಿಳಿಯಪಡಿಸುವೆನು. ಆದರೆ ಈ ನಡುವೆ ಇದೊಂದು ಮಾತನ್ನು ಕುರಿತು ತಮ್ಮೊಂದಿಗೆ ಕೇಳಿ ತಿಳಿದುಕೊಳ್ಳಬೇಕಾಗಿದೆ. ಅದೇನೆಂದರೆ - ಕ.ಸಾ.ಪ. ಪತ್ರಿಕೆಯು ತಮ್ಮ ಲೇಖನದಲ್ಲಿ ೧೪೭ನೆಯ ಪುಟದ ೭ನೆಯ ಅಡಿಬರಹದಲ್ಲಿ ಜಯಕರ್ನಾಟಕ ಸಂಪುಟ ೧೦, ಸಂಚಿಕೆ ೫ ಮತ್ತು ಸಂಚಿಕೆ ೬ರಲ್ಲಿ ರನ್ನನಚಕ್ರೇಶ್ವರ ಚರಿತೆ ಭರತ ಚಕ್ರೇಶ್ವರನ ಚರಿತೆಯೇ ಇರಬೇಕೆಂದು ನಾನು ಊಹಿಸಿದ್ದೇನೆಂದು ತಾವು ಹೇಳಿರುವಿರಷ್ಟೆ. ನನಗಾದರೋ ಜಯಕರ್ನಾಟಕ ದಲ್ಲಿ ಹಾಗೆ ಬರೆದಿರುವಂತೆ ನೆನಪೂ ಇಲ್ಲ. ನನ್ನೊಂದಿಗಿರುವ ಜ.ಕ.ದ ೧೦ನೆಯ ಸಂಪುಟದಲ್ಲಿ ಹುಡುಕಾಡಿದರೆ ನನ್ನ ಆ ಮಾತೂ ಅದರಲ್ಲಿಲ್ಲ, ಎಂಬುದರಿಂದ ದಯ ಮಾಡಿ ನನ್ನ ಆ ಮಾತನ್ನು ತಾವು ಎಲ್ಲಿ ಕಂಡುದೆಂದು ಆದಷ್ಟು ಬೇಗನೆ ಅಂದರೆ ನಾನೀಗ ಬರೆಯಲಿಕ್ಕೆ ಹಿಡಿದ ಲೇಖವು ಬರೆದು ತೀರುವ ಮುಂಚೆಯೇ ನನಗೆ ಬರೆದು ಕಳುಹಿಸಿದರೆ ಬಹಳ ಉಪಕಾರ. ಏಕೆಂದರೆ ರನ್ನನ ಚಕ್ರೇಶ್ವರ ಚರಿತವನ್ನು ಕುರಿತು ತಮಗೆ ಈ ಮೊದಲೇ ಬರೆದಿರುವಂತೆ ಮಂಗಳೂರಿನ 'ದೇಶರಂಜನ'ದಲ್ಲಿ (೧೯೩೨) ಮಾತ್ರ ವಿನಾ ಮತ್ತೆಲ್ಲಿಯೂ ಬರೆದಿರುವಂತೆ ನನಗೆ ನೆನಪಿಲ್ಲ.

ತೊಂದರೆ ಕೊಟ್ಟ ಬಗ್ಗೆ ದಯಮಾಡಿ ಕ್ಷಮಿಸುವುದು.

ಇತಿ ನಮಸ್ಕಾರ

ಟಿಪ್ಪಣಿ : ಶ್ರೀ ಲೋಕಾಪುರರು ಪ್ರಸ್ತಾಪಿಸಿದ ಲೇಖವು ಜಯಕರ್ನಾಟಕದ ೯ನೆಯ ಸಂಪುಟದ ೫-೬ರ ಸಂಯುಕ್ತ ಸಂಚಿಕೆಯಿಂದ ಮೊದಲುಗೊಂಡು, ಆ ವರ್ಷದ ಕೊನೆಯವರೆಗೆ ಪ್ರಕಟವಾದ 'ರನ್ನನೊಬ್ಬನೇ' ಎಂಬ ಲೇಖನಮಾಲೆಯಲ್ಲಿ ಬಂದಿದೆ. (ಸಂಪುಟ ೯ ಪುಟ ೮೯೭). ಪೈ ಅವರು, ಡಾ. ಶಾಮಾಶಾಸ್ತ್ರಿಯವರ ಅಭಿಪ್ರಾಯವೊಂದನ್ನು ಅನುಮೋದಿಸುವ ಮೂಲಕ, ಪರ್ಯಾಯವಾಗಿ ರನ್ನನ ಕೃತಿಯಾದ 'ಚಕ್ರೇಶ್ವರ ಚರಿತೆ'ಯು ಭರತ ಚಕ್ರೇಶ್ವರನ ಕಥೆಯೇ ಆಗಿದೆ - ಎಂದು ಅದರಲ್ಲಿ ಹೇಳಿದ್ದಾರೆ.

೧೦

ಉಗ್ರಾಣ ಮಂಗೇಶರಾವ (ಪುತ್ತೂರು) ೧೧-೮-೪೫

Your letter. Thanks.

1) The ಧರ್ಮಭೂಷಣ of your ಬಾಹುಬಲಿ ಪಂಡಿತ whom I have identified with the ಧರ್ಮಭೂಷಣ of ಶ್ರವಣಬೆಳ್ಗೊಳ No. 274, died as I have said in my last letter, on Wednesday 7 April, 1372 A C. His disciple was ವರ್ಧಮಾನ as said in that inscription & his Guru was ಅಮರಕೀರ್ತಿ who himself was a disciple of an earlier ಧರ್ಮ ಭೂಷಣ. Now in ಕವಿಚರಿತೆ I (p. 428) the statement (re ಮಧುರ

ಧರ್ಮಭೂಷಣ). 'ಹಿಂದೆ ಪಟ್ಟಕ್ಕೆ ಬಂದ ಭಟ್ಟಾರಕ ರಾಜರಾಯ ಗುರುವೆನಿಸಿದ ವರ್ಧಮಾನ ಮುನಿ' clearly shows that one ವರ್ಧಮಾನ was the disciple and successor of ಧರ್ಮಭೂಷಣ. If so, that ಧರ್ಮಭೂಷಣ would clearly be the ಧರ್ಮಭೂಷಣ mentioned by me. Further it is the same ಧರ್ಮಭೂಷಣ acc. to whose instructions ಕೇಶವವರ್ಣಿ composed his ಕರ್ಣಾಟಕ ವೃತ್ತಿ to ಗೊಮ್ಮಟಸಾರ (ಕವಿ ಚರಿತೆ I pp. 415-76). He is perhaps the same as the ಧರ್ಮಭೂಷಣ mentioned by ಮಂಗರಾಜ I (ಕವಿ ಚರಿತೆ I p. 420 fn 1). The ಲಕ್ಷ್ಮೀಸೇನ mentioned by ಮಂಗರಾಜ (ಕವಿ ಚರಿತೆ I p. 420 fn 1) is perhaps identical with the ಲಕ್ಷ್ಮೀಸೇನ mentioned by your ಬಾಹುಬಲಿ ಪಂಡಿತ as ಲಕ್ಷ್ಮೀಸೇನ ಭಟ್ಟಾರಕ (in the verse quoted by you in your last letter). The ಧರ್ಮಭೂಷಣ mentioned by ನಾಭಿರಾಜ as the disciple of ನಾಗಚಂದ್ರ might be a different person(?). Further from the quotation given in ಕವಿ ಚರಿತೆ I (pp. 406-7) re. ನಾಚಿರಾಜ–ಶಕ 1318ನೆಯ ಯುವ (ಸಂ.1)ದಲ್ಲಿ = 1395-96, ರಾಯರಾಜ ಗುರು ಮಂಡಲಾಚಾರ್ಯ ರಾಯವಾದಿಪಿತಾ ಮಹಾ ಸಕಲ ವಿದ್ವಜ್ಜನ ಚಕ್ರವರ್ತಿ ನಿಖಿಳ ಶಾಸ್ತ್ರ ವ್ಯಾಖ್ಯಾನ ವಿಶಾರದ ಶ್ರೀ ಮಲಧಾರಿ ನಾಗರಾಜ ಭಟ್ಟಾರಕರ ಶಿಷ್ಯರಪ್ಪ ಶ್ರೀ ಧರ್ಮಭೂಷಣ ಶ್ರೀ ಅಭಯಚಂದ್ರ ಸೈದ್ಧಾಂತಿಕ ದೇವರು ಬರೆದ ಶ್ರೀ ಪಂಚ ಪರಮೇಷ್ಟಿಗಳ ಸ್ವರೂಪ, ಯೋಗಾಮೃತ ಅಮರ ಸಿಂಹದ ವೃತ್ತಿ, ನಾಚಿರಾಜ, ಕೌಮಾರ ವ್ಯಾಕರಣ it is quite possible that ಧರ್ಮಭೂಷಣ is just a title and not ಆಶ್ರಮ ನಾಮ of any particular person, so that there is no mention in it of a ಜೈನ ಗುರು whose ಆಶ್ರಮ ನಾಮ was ಧರ್ಮಭೂಷಣ (for the author of these works was the single man ಅಭಯಚಂದ್ರ, and not two persons ಧರ್ಮಭೂಷಣ as well as ಅಭಯಚಂದ್ರ) as is the case with the ಧರ್ಮಭೂಷಣ I have mentioned, whose ಆಶ್ರಮ ನಾಮ itself was ಧರ್ಮಭೂಷಣ. Moreover it is quite clear from the very statement that the works mentioned there were written (ಬರೆದ) in that year ಶಾ.ಶ 1318 ಯುವ ಸಂ = 1395-96 A. C. so that he perhaps was not born in 1353 A.C. when ಬಾಹುಬಲಿ ಪಂಡಿತ composed his ಧರ್ಮನಾಥ ಪುರಾಣ. So your ಧರ್ಮಭೂಷಣ is not only an impossible being but (even if he were a possible being) cannot have been born at that time of ಬಾಹುಬಲಿ ಪಂಡಿತ's work or was but in his teens at that time if he had been born before then.

2) Re ವೀರಬಲ್ಲಾಳರಾಯ... let me say that ■ ಚಾರುಕೀರ್ತಿ ಪಂಡಿತ ದೇವ's name appears in ಶ್ರವಣಬೆಳ್ಗೊಳ No. 254 where he is extolled in lines 85 to 141. He is known from that inscription to have

died in ಶಾ.ಶ 1320. ಈಶ್ವರ ಸಂವತ್ಸರ ಮಾಘ ಶುಕ್ಲ 14 – 1398 A.C.(U 139-141). In U 95-97, he is said to have cured the king ಬಲ್ಲಾಳ- ಬಲ್ಲಾಳ ಕ್ಷೋಣಿಪಾಲಂ ವಲಿತಬಲಿಬಲಂ ವಾಜಿಭಿರ್ವೇಜಿತಾಜಿಂ ರೋಗಾವೇಗಾದ್ಗತಾಸು ಸ್ಥಿತಿಮ ಪಿಸಹಸೋಲ್ಲಾಘಿತಾಮಾನಿನಾಯ – When king ಬಲ್ಲಾಳ, encloser of the forces of the strong (enemies), terrifier in war by his cavalry, was verily in a moribund condition through severe illness, he (i.e. ಚಾರುಕೀರ್ತಿ ಪಂಡಿತ) quickly restored him to health. So that now you may take for certain that the ಚಾರುಕೀರ್ತಿ ಪಂಡಿತದೇವ praised by ಬಾಹುಬಲಿ ಪಂಡಿತ is this ಚಾರುಕೀರ್ತಿ ಪಂಡಿತ of ಶ್ರವಣ ಬೆಳ್ಗೊಳ No. 254, and not the much earlier ಚಾರುಕೀರ್ತಿ whom I mentioned in my last letter.

I have not yet been able to find out the ಮೇಘಚಂದ್ರ and ನಯಕೀರ್ತಿ mentioned by ಬಾಹುಬಲಿ ಪಂಡಿತ. I shall try. I have not yet heard from Mr. Panchamukhi (Dharwar) to whom I have written about them. I shall let you know if and after I shall hear from him.

3) One of the verses quoted by you in your last letter ಪರಮಶ್ರುತ ಮುನಿಗಳ mentions a ಶ್ರುತಮುನಿ. From ಶ್ರವಣ ಬೆಳ್ಗೊಳ No. 254 (referred to above) it appears that there was a ಶ್ರುತಮುನಿ whose position is as follows (U 61-90)—

| | |
|---|---|
| ಅಭಯಚಂದ್ರಸೂರಿ | ಶ್ರುತಕೀರ್ತಿ |
| ಶ್ರುತಮುನಿ | ಚಾರುಕೀರ್ತಿ ಪಂಡಿತಾಚಾರ್ಯ |
| | (Mentioned above) |

4) Another verse quoted by you mentioning 'ಮಾರನ ಗರ್ವವೆಂಬ ಚಾರುವಿಶಾಲಕೀರ್ತಿ ಮುನಿಪುಂಗವ' and in ಶ್ರವಣ ಬೆಳ್ಗೊಳ No. 65, a certain ಚಾರುಕೀರ್ತಿ is mentioned as the ಶಿಷ್ಯ of ಶುಭಚಂದ್ರ ತ್ರೈವಿದ್ಯ who was the disciple of ಮೇಘನಂದಿ who was the disciple of an earlier ಶುಭ ಚಂದ್ರಮುನಿ who died in ಶಾ.ಶ 1235 ಪ್ರಮಾದಿ ಸ। ಶ್ರಾವಣ ಕೃಷ್ಣ 14 ವಕ್ರೀ (ಕುಜ. ವಾರ; fn ಕುಜವಕ್ರ) = Tuesday 21 August 1313 A.C. Possibly this ಚಾರುಕೀರ್ತಿ would answer to the ಚಾರುವಿಶಾಲಕೀರ್ತಿ ಮುನಿಪುಂಗವ of this verse.

ಶುಭಚಂದ್ರ (died 1313 A.C.)

1

ಮಾಘನಂದಿ

ಶುಭಚಂದ್ರ ತ್ರೈವಿದ್ಯ

1

ಚಾರುಕೀರ್ತಿ

(His name has been amplified as ಚಾರುವಿಶಾಲಕೀರ್ತಿ for metrical exigency.)

Please convey my compliments to Sri Majeshwar Ananta Rao and oblige.

Your's sincerely

೧೧

## ಉಗ್ರಾಣ ಮಂಗೇಶರಾವ (ಪುತ್ತೂರು)

೩೦-೮-೪೫

Dear Mr. Mangesh Rao,

In continuation of my letter of the 11th inst. I am writing this to give some information as regards the ಮೇಘಚಂದ್ರ mentioned by ಬಾಹುಬಲಿ ಪಂಡಿತ in ಧರ್ಮನಾಥ ಪುರಾಣ. His name occurs in ನಂಜನಗೂಡು No. 43 inscription (Epigraphia Carnatica, Vol III), which is dated ಶಕ ವರ್ಷ ೧೨೯೩ನೆಯ ಸಂದ ವಿರೋಧಿಕೃತು ಸಂವತ್ಸರದ ಮಾರ್ಗಶಿರ ಸು(ಶುದ್ಧ) ೧೫(= ಹುಣ್ಣಿಮೆ) ಆ (= ಆದಿತ್ಯವಾರ) which corresponds to **Sunday 23rd November 1371 A C.** and in which it is further stated that on that date ಮೇಘಚಂದ್ರ ದೇವರು ಮುಕ್ತಿಗೆ ಸಂದರು. The verse quoted by you in your first letter of 30 July, viz., ಜೈನ ಮತಾಂಬುರಾಶಿ ಪರಿವರ್ಧನ &c, occurring in ಧರ್ಮನಾಥ ಪುರಾಣ and extolling that ಮೇಘಚಂದ್ರ also occurs in this inscription. So there is hardly any more doubt that this ಮೇಘಚಂದ್ರ mentioned in this ನಂಜನಗೂಡು No. 43 inscription is quite identical with ಮೇಘಚಂದ್ರ praised in ಬಾಹುಬಲಿ ಪಂಡಿತ ಧರ್ಮನಾಥ ಪುರಾಣ. This information I got just today from Mr. D.L. Narasimhachar of Maharaja's College, Mysore, to whom I had referred that point when I found myself helpless as regards identifying him. (Sorry I do not possess the vol. III of Epigraphia Carnatica). So please express your gratefulness to him in your introduction and oblige.



ಪತ್ರಗಳು ಚಿತ್ರಿಸಿದ

He further writes in his today's letter that ಚಾಮರಾಜ ನಗರ No. 157th inscription (Epigraphia Carnatica Vol. IV) begins with the name ಬಾಹುಬಲಿ ಪಂಡಿತ where after occurs the verse ನಯಕೀರ್ತಿ ಬ್ರತಿನಂದನಂ & c. quoted by you from ಧರ್ಮನಾಥ ಪುರಾಣ in your letter of 30th July. Unfortunately this inscription is **not dated** but is assigned to about 1380 A.C. Mr. D. L. Narasimhachar has promised to look up ನಯಕೀರ್ತಿ also and inform me if he succeeds in coming across his name. So you have now all the names mentioned in your work duly identified except of course........

More after I shall hear from Mr. D.L.N. With regards to self and Mr. Anantha Rao.

I am
Yours sincerely

೧೨

## ಉಗ್ರಾಣ ಮಂಗೇಶರಾವ (ಪುತ್ತೂರು) ೨–೯–೪೫

Dear Mr. Mangesh Rao,

Yours of the 31st ult. to hand here today. You have done well to write to Mr. D.L. Narasimhachar. But ask him to let you know the name of the place where the ಚಾಮರಾಜ ನಗರ inscription is situated, for all the inscriptions found in a taluk are named after that taluk in 'Epigraphia Carnatica.' So that 157 might be situated in some village of the ಚಾಮರಾಜ ನಗರ taluk and not in ಚಾಮರಾಜನಗರ itself. This might help you to locate the place of your poet.

Chamarajnagar is the name of Taluk as well as its head quarters in the Mysore Dist. of the Mysore State. It lies in the south-east of Mysore District.

Many thanks for your very kind appreciation of my sonnet.

With regards,

I am, Yours sincerely

ಗೋವಿಂದ ಪೈ

೧೩

**ಅಮ್ಮೆಂಬಳ ಶಂಕರನಾರಾಯಣ ನಾವಡ** (ಕೋಟೆಕಾರು) ೧೬-೪-೪೭

ಗೋವಿಂದ ಪೈ ಮಾಡುವ ನಮಸ್ಕಾರ.

ತಮ್ಮ ನಿನ್ನೆಯ ತಾರೀಖಿನ ಕಾರ್ಡು ಈವತ್ತು ಕೈ ಸೇರಿತು. ನಾಳೆಯ ಆದಿತ್ಯವಾರ ೨೩ನೆಯ ತಾರೀಖಿನಂದು ನಮ್ಮ ಯುಗಾದಿಯ ಹಬ್ಬವಾದ ಕಾರಣ ಅಂದು ತಾವು ಬಾರದೆ, ತಮಗೆ ಅನುವಾದ ಬೇರೊಂದು ದಿನ ಬನ್ನಿರಿ. ತಾವು ಬರುವಂದು ನಾನು ಇಲ್ಲಿ ಇದ್ದಿರುವಂತೆ ೨-೩ ದಿನ ಮುಂಚೆ ನನಗೆ ತಾವು ಬರುವ ದಿನವನ್ನು ತಿಳಿಸಿರಿ.

ಇತಿ ನಮಸ್ಕಾರ

P. S. ಇದೇ ತಿಂಗಳ ೩೦ನೆಯ ತಾರೀಖು ರವಿವಾರ ಶ್ರೀರಾಮನವಮಿಯಾದ ಕಾರಣ ಅಂದೂ ನನಗೆ ಅವಕಾಶವಿರದು. ಆ ನಡುವೆ ಯಾವೊಂದು ದಿನ ಬಂದರೆ ಆಗಬಹುದು.

೧೪

**ಅಮ್ಮೆಂಬಳ ಶಂಕರನಾರಾಯಣ ನಾವಡ** (ಕೋಟೆಕಾರು) ೧೩-೪-೪೭

ಗೋವಿಂದ ಪೈ ಮಾಡುವ ನಮಸ್ಕಾರ.

ತಾವು ಕಳುಹಿಸಿರುವ ಮುನ್ನುಡಿಯ ಪ್ರೂಫೂ ತಮ್ಮ ಕಾರ್ಡೂ ಈವತ್ತು ಮುಟ್ಟಿವೆ. ತಾವು ಅಲ್ಲಲ್ಲಿ ಹಾಕಿರುವ ಇನ್ವರ್ಟೆಡ್ ಕೋಮಗಳನ್ನು (inverted commas) ನಾನು ಒಪ್ಪುವುದಿಲ್ಲವಾದ ಕಾರಣ ಅವೆಲ್ಲವನ್ನೂ ಅಚ್ಚಾದ ಪ್ರೂಫಿನಿಂದ ತೆಗೆದಿರುತ್ತೇನೆ. Inverted comma ಗಳನ್ನು ನಾವು ಇಂಗ್ಲೀಷಿನಿಂದ ತೆಗೆದುಕೊಂಡಿರುವೆವೆಂದು ತಾವು ಬಲ್ಲಿರಷ್ಟೆ. ಆದರೆ ಈಗ ಅವನ್ನು ಇಂಗ್ಲೀಷಿನಲ್ಲಿ ಹೇಗೆ ಉಪಯೋಗಿಸುತ್ತಾರೆಂದು ತಾವು ಅರಿಯಿರೆಂದು ತೋರುತ್ತದೆ. ಆದಕಾರಣ ನನ್ನ ಮುನ್ನುಡಿಯ ಹಸ್ತಪ್ರತಿಯಲ್ಲಿ ಇಲ್ಲದವನ್ನು ದಯಮಾಡಿ ಹಾಕುವುದು 'ಬೇಡ. ಅವನ್ನು ತೊಡೆದುಬಿಡಬೇಕು. 'ಅನುಷ್ಟುಪ್' ಆ ಶಬ್ದದ ಪ್ರಕೃತಿ ಭಾವರೂಪ. 'ಅನುಷ್ಟುಪ್ ಛಂದಸ್ಸು' ಎಂಬ ಸಮಸ್ತ ಪದದಲ್ಲಿ ಅದು ಹಾಗೆಯೇ ಇರಬೇಕೋ ಅಥವಾ ಅನ್ಯಥಾ ಇರಬೇಕೊ ಎಂದು ಆಲೋಚಿಸಿರಿ. 'ಬೆಳೆಯುತ್ತೇ' ಎಂಬುದು ಸರಿಯೇ ಇದೆಯಾದರೂ ತಮ್ಮ ಸೂಚನೆಯನ್ನು ಮನ್ನಿಸಿ 'ಬಳೆಯುತ್ತೇ' ಎಂದು ಮಾಡಿರುತ್ತೇನೆ. ಹೀಗೆ ಆ ಪ್ರೂಫಿನಲ್ಲಿ ಅನೇಕ ತಿದ್ದುಪಡಿಗಳನ್ನು ಮಾಡಬೇಕಾಗಿರುವುದರಿಂದ ಅವೆಲ್ಲವನ್ನು ನೇರ್ಪಡಿಸಿದ ಎರಡನೆಯ ಪ್ರೂಫುಗಳನ್ನು ನನಗೆ ಬೇಗ ಕಳಿಸಿಕೊಡುವ ಉಪಕಾರ ಮಾಡಿರಿ. ತಪ್ಪಬೇಡಿರಿ, ತೊಂದರೆ ಕೊಟ್ಟಿರುವ ಬಗ್ಗೆ ಕ್ಷಮಿಸಿರಿ. ಈವತ್ತು ಕೈ ಸೇರಿದ ಪ್ರೂಫನ್ನು ತಿದ್ದಿ ಈವತ್ತೆ ಪ್ರೆಸ್ಸಿಗೆ ಕಳಿಸಿರುತ್ತೇನೆ.

ನಮಸ್ಕಾರ

ಟಿಪ್ಪಣಿ: ಶ್ರೀ ನಾವಡರ 'ಕನ್ನಡ ಕುಮಾರ ಸಂಭವ' ಮುನ್ನುಡಿಯ ಮುದ್ರಣಕ್ಕೆ ಸಂಬಂಧಪಟ್ಟದ್ದು ಈ ಪತ್ರ.

೧೫

**ಅಮ್ಮೆಂಬಳ ಶಂಕರನಾರಾಯಣ ನಾವಡ** (ಕೋಟೆಕಾರು) ೧೩-೪-೪೭

ಗೋವಿಂದ ಪೈ ಮಾಡುವ ನಮಸ್ಕಾರ.

ತರುವಾಯ ತಾವು ಕಳಿಸಿದ ಪ್ರೂಫನ್ನು ತಿದ್ದಿ ಪ್ರೆಸ್ಸಿಗೂ ತಮ್ಮ ಕಾರ್ಡಿಗೆ ಪ್ರತ್ಯುತ್ತರ ಬರೆದು ತಮಗೂ ಈವತ್ತು ಪೂರ್ವಾಹ್ನ ಕಳಿಸಿದ ಮೇಲೆ, ನಾನು 'ಅನುಷ್ಟುಭ್' ಎಂದು ಬರೆದುದು ಸರಿಯಲ್ಲ, ಅದು 'ಅನುಷ್ಟುಪ್' ಎಂದಾಗಬೇಕೆಂದು ತಾವು ಸೂಚಿಸಿದುದನ್ನು ನಾನು ಏನೋ ಮರೆಯಿಂದ ಒಪ್ಪದೆ, 'ಅನುಷ್ಟುಭ್' ಎಂದೇ ಆಗಬೇಕೆಂದು ನನ್ನ ಪ್ರತ್ಯುತ್ತರದಲ್ಲಿ ಬರೆದುದು ತಪ್ಪೆಂದು ಮನವರಿಕೆಯಾಗಿ ಈ ಕಾರ್ಡನ್ನು ತಮಗೆ ಈಗಲೇ ಮರಳಿ ಬರೆದಿರುತ್ತೇನೆ. ಅನುಷ್ಟುಭ್ + ಛಂದಸ್ಸು, ಎಂಬ ಸಂಸ್ಕೃತ ಸಮಾಸ ಪದವು ಸಂಸ್ಕೃತ ಸಂಧಿಯ ನಿಯಮಗಳ ಮೇರೆಗೆ 'ಅನುಷ್ಟಪ್ ಛಂದಸ್ಸು' ಎಂದೇ ಆಗಬೇಕು. ತಮ್ಮ ಸೂಚನೆಯೇ ನೇರಾಗಿದೆ. ದಯಮಾಡಿ ಪ್ರೆಸ್ಸಿಗೆ ಹೋಗಿ, ಆ ಶಬ್ದವನ್ನು 'ಅನುಷ್ಟುಪ್' ಎಂದು ತಿದ್ದಿರಿ, ಹಾಗೂ ತಮ್ಮ ಸೂಚನೆಯನ್ನು ತಪ್ಪೆಂದ ಬಗ್ಗೆ ನನ್ನನ್ನು ಕ್ಷಮಿಸಿರಿ. ನನ್ನ ಮುನ್ನುಡಿಯ ಇನ್ನೊಂದು ಪ್ರತಿಯನ್ನೂ ನನ್ನ ತಿದ್ದಿಕೆಯ ಬಗ್ಗೆ ಕಳಿಸಿಕೊಡಿರಿ.

೧೬

**ಅಮ್ಮೆಂಬಳ ಶಂಕರನಾರಾಯಣ ನಾವಡ** (ಕೋಟೆಕಾರು) ೧೯-೮-೪೭

ಗೋವಿಂದ ಪೈ ಮಾಡುವ ನಮಸ್ಕಾರ.

ತಮ್ಮ ನಿನ್ನೆಯ ಕಾರ್ಡು ಈವತ್ತು ಕೈಸೇರಿತು. ಕೊಪ್ಪಳದ ಕರ್ಣಾಟಕ ಸಂಘದವರು 'ರತ್ನಾಕರ ಪ್ರಶಸ್ತಿ'ಯನ್ನು ಪ್ರಕಟಿಸುತ್ತಾರೆ. ಆ ಸಂಘದ ಕಾರ್ಯದರ್ಶಿಯವರ ವಿಳಾಸ ಹೀಗಿದೆ :

Sri N. N Shastri
Hon. Secretary, Karnatak Sangha
Koppal P.O. (Hyderabad State)

ಇತಿ ನಮಸ್ಕಾರ

೧೭

**ಅಮ್ಮೆಂಬಳ ಶಂಕರನಾರಾಯಣ ನಾವಡ** (ಕೋಟೆಕಾರು) ೯-೧೦-೪೭

ಗೋವಿಂದ ಪೈ ಮಾಡುವ ನಮಸ್ಕಾರ.

ತಮ್ಮ ಪ್ರೀತಿಪೂರ್ವಕವಾದ ಕಾರ್ಡು ನಿನ್ನೆ ಮುಟ್ಟಿತು. ನನ್ನ 'ವೈಶಾಖಿ'ಯನ್ನು ವಿಮರ್ಶಿಸಿರುವ ಆ 'ಪುಸ್ತಕ ಪ್ರಪಂಚ'ದ ಪ್ರತಿಯನ್ನು ವಿಮರ್ಶಕರಾಗಲಿ ಪ್ರಕಾಶಕ

ರಾಗಲಿ ನನಗೆ ಕಳಿಸಿಲ್ಲ. ನಿನ್ನೆ ತಮ್ಮ ಕಾರ್ಡು ಮುಟ್ಟಿದ ಕೂಡಲೇ ಮಂಗಳೂರಿಗೆ ಹೋಗುವ ನಮ್ಮ ಹುಡುಗರೊಂದಿಗೆ ಹೇಳಿ ಅಲ್ಲಿ ಮಾರಾಟಕ್ಕಿದೆಯೊ ಎಂದು ಹುಡುಕಾಡಿಸಿದೆ. ಅಲ್ಲಿಯೂ ದೊರೆಯಲಿಲ್ಲ. ಆದಕಾರಣ ತಮ್ಮೊಂದಿಗಿರುವ ಅದರ ಪ್ರತಿಯನ್ನು ಒಮ್ಮೆ ಓದಿ ನೋಡಲಿಕ್ಕೆ ೨ ದಿನಗಳ ಮಾತಿಗೆ ಕಳಿಸಿಕೊಟ್ಟರೆ ತುಂಬ ಉಪಕಾರ. ಟಪ್ಪಾಲು ದ್ವಾರಾ ಅದನ್ನು ಬುಕ್ ಪೋಸ್ಟಿನಲ್ಲಿ ಕಳಿಸಿ ಕೊಟ್ಟರೆ, ಓದಿಮುಗಿಸುತ್ತಲೆ ಮರಳಿ ಟಪ್ಪಾಲು ದ್ವಾರಾ ಕಳಿಸಿಕೊಡುವೆನು. ತೊಂದರೆ ಕೊಟ್ಟಿರುವ ಬಗ್ಗೆ ಕ್ಷಮಿಸುವುದು.

ಇತಿ ನಮಸ್ಕಾರ

೧೮

**ಅಮ್ಮೆಂಬಳ ಶಂಕರನಾರಾಯಣ ನಾವಡ** (ಕೋಟೆಕಾರು) ೨೦-೧-೪೮

ಗೋವಿಂದ ಪೈ ಮಾಡುವ ನಮಸ್ಕಾರ

ತಮ್ಮ ೧೭ನೆಯ ತಾರೀಕಿನ ನೆನವರಿಕೆಯ ಕಾರ್ಡು ಮುಟ್ಟಿತು. ತಮ್ಮ 'ಸರ' ಇಲ್ಲಿಗೆ ಬರುವಾಗ ನಾನು ಬೇರೆ ಕೆಲಸದಲ್ಲಿದ್ದೆ. ಹಾಗೆಯೇ ಸಮ್ಮೇಲನ ಬಂತು. ಹೀಗಾಗಿ ಆ ಕೆಲಸ ಈ ಕೆಲಸ ಎಂದು ತಮಗೆ ಪತ್ಯುತ್ತರ ಬರೆವುದಕ್ಕೆ ಇಷ್ಟು ವಿಳಂಬವಾದ ಬಗ್ಗೆ ದಯಮಾಡಿ ಕ್ಷಮಿಸುವುದು. 'ಸರ'ವನ್ನು ಬಂದಾಗಲೇ ಓದಿದ್ದೇನೆ. ಓದಿ, ಬಹಳ ಸಂತೋಷ ಪಟ್ಟಿದ್ದೇನೆ ಅದರಲ್ಲಿಯ ಕವಿತೆಗಳಲ್ಲಿ ಅಂಥವು ಇಂಥವು ಎಂದು ಆಯದೆ ಹೆಸರಿಸದೆ ಒಟ್ಟಾರೆ ಹೇಳುವುದಾದರೆ ಅವೆಲ್ಲವೂ ಬಹಳ ಮನೋಹರವಾಗಿವೆ. ತಮ್ಮನ್ನು ಅಭಿನಂದಿಸುತ್ತೇನೆ. ಇತೋಪ್ಯತಿಶಯ ವಾಗಿ ರಚಿಸುವಂತೆ ಶ್ರೀ ದೇವರು ತಮ್ಮನ್ನು ಅನುಗ್ರಹಿಸಲಿ ಎಂದು ಪ್ರಾರ್ಥಿಸು ತ್ತೇನೆ. (ಆದರೆ ಒಂದೇ ಒಂದು ಅಡ್ಡಮಾತನ್ನು ಹಾಕಿ ಬಿಡಬಹುದಾದರೆ, ತಮ್ಮ ಚತುರ್ದಶ ಪದಿಗಳಲ್ಲಿ (sonnets) ಭಾವದ ಮಟ್ಟಿಗೆ ಕೊರತೆಯಿ ಲ್ಲವಾದರೂ, ಅವು ಒಂದೂ ಕ್ರಮಬದ್ಧವಾಗಿಲ್ಲ. ಅಂತ್ಯಪ್ರಾಸಗಳೂ ನೇರಾಗಿಲ್ಲ. ಕೊನೆಯ ೨ ಬಂತಿಗಳ ವಿರಾಮವೂ ಇಲ್ಲ. ಅತಏವ ಅವುಗಳ ಬಗ್ಗೆ ಇನ್ನು ಮುಂದೆ ಹೆಚ್ಚಿಗೆ ಎಚ್ಚರಗೊಂಡಿದ್ದರೆ ಲೇಸೆನಿಸುತ್ತದೆ.

ಇತಿ ನಮಸ್ಕಾರ

೧೯

**ಸೇಡಿಯಾಪು ಕೃಷ್ಣಭಟ್ಟ** (ಮಂಗಳೂರು) ೨೧-೧-೪೯

ಗೋವಿಂದ ಪೈ ಮಾಡುವ ನಮಸ್ಕಾರ. ತಾವು ಅತ್ಯಂತ ಪ್ರೀತಿಪೂರ್ವಕವಾಗಿ ಕಳಿಸಿ ರುವ ತಮ್ಮ "ಕೆಲವು ಸಣ್ಣ ಕಾವ್ಯಗಳು" ಎಂಬ ಪುಸ್ತಕ ನನಗೆ ಇವತ್ತು ಮುಟ್ಟಿತು. ಆ ಬಗ್ಗೆ ತಮಗೆ ತುಂಬಾ ಆಭಾರಿಯಾಗಿದ್ದೇನೆ. ಪುಸ್ತಕ ಕೈಸೇರುತ್ತಲೆ, ನಾನು ಈ ವರೆಗೆ ಕಂಡಿಲ್ಲದ ''ಪುಣ್ಯಲಹರಿ"ಯನ್ನು ಓದಿದೆ. ಕವಿತೆ ಬಹು ಸೊಗಸಾಗಿದೆ. ತುಂಬಾ ಮೇಲಾಗಿದೆ. ಮಿಕ್ಕ ಕವಿತೆಗಳನ್ನೂ ಈ ಮುಂಚೆ ಪ್ರಕಟವಾದಂತೆ

ಆಗಾಗ್ಗ ಓದಿ ಬಹಳ ಸಂತೋಷಿಸಿರುತ್ತೇನೆ, ಹಾಗೂ ಯಥಾವಕಾಶವಾಗಿ ಅವನ್ನು ಮತ್ತೊಮ್ಮೆ ಓದಲಿದ್ದೇನೆ. ಈ ಕವಿತೆಗಳನ್ನೆಲ್ಲ ಒಟ್ಟುವಿಸಿ, ಪುಸ್ತಕರೂಪವಾಗಿ ಪ್ರಕಟಿಸಿ, ಕನ್ನಡ ಕಾವ್ಯ ಸಾಹಿತ್ಯಾಭಿವೃದ್ಧಿಗೆ ತಾವು ಮಾಡಿರುವ ಉಪಕಾರದ ಬಗ್ಗೆ ತಮ್ಮನ್ನು ಮನಸಾರೆ ಅಭಿನಂದಿಸುತ್ತೇನೆ. ಇತೋಪ್ಯತಿಶಯುವಾದ ಕಾವ್ಯರಚನೆಯನ್ನು ತಾವು ಮಾಡುತ್ತಿರುವಂತೆ ಶ್ರೀ ದೇವರು ತಮ್ಮನ್ನು ಅನು ಗ್ರಹಿಸಲೆಂದು ಪ್ರಾರ್ಥಿಸುತ್ತೆನೆ.

ಇತಿ ನಮಸ್ಕಾರ

೨೦

[ಹೆಸರು ತಿಳಿಯದು] ೧೭-೪-೪೯

Dear Doctor,

Herewith enclosed please find the brochure of your dear baby. May God bless it with a very long, very happy, very healthy and very prosperous life in the service of our Motherland and Mother Religion!

With best regards,

Yours very sincerely

Enclosure-Horoscope.

೨೧

**ಸದಾನಂದ ನಾಯಕ** (ಹುಬ್ಬಳ್ಳಿ) ೧೭-೧೦ [?]

ಗೋವಿಂದ ಪೈಮಾಡುವ ನಮಸ್ಕಾರ. ತಮ್ಮ ಸಪ್ಟಂಬರ 28ನೆಯ ತಾರೀಕಿನ ಪತ್ರ ಇಲ್ಲಿಗೆ ಬರುವಾಗ ಸಿರ್ಶಿ, ಉಡುಪಿ, ಮೂಡಬಿದರೆಯತ್ತ ಕಡೆ ಹೋಗಿದ್ದೆ. ಅಲ್ಲಿಂದ ಇಲ್ಲಿಗೆ ಮರಳುವುದರೊಳಗೆ ಮಂಗಳೂರಿನ ಗವರ್ನ್‌ಮೆಂಟ್ ಕಾಲೇಜಿನಲ್ಲಿ toast propose ಮಾಡಬೇಕೆಂಬ ಆಮಂತ್ರಣ ಬಂತು. ಹೀಗಾಗಿ ತಮ್ಮ ಓಲೆಗೆ ಉತ್ತರ ಬರೆವರೆ ಈವರೆಗೆ ಆಗದಿದ್ದ ತಪ್ಪಿಗಾಗಿ ಕ್ಷಮಿಸುವುದು.

ನಾನು ನಾಗವರ್ಮರು ಒಬ್ಬರೇ ಎಂದಿಲ್ಲ. ಬೇರೆ ಬೇರೆ ನಾಲ್ಕು ಮಂದಿ ನಾಗ ವರ್ಮರನ್ನು ತೋರಿಸಿರುತ್ತೇನೆ. ಅವರಲ್ಲದೆ ಮತ್ತೂ ಬೇರೊಬ್ಬ ನಾಗವರ್ಮರು ಇರುವಂತೆಯೂ ಈಗ ಕೇಳಿ ಬರುತ್ತಿದೆ. ಹಾಗೂ ಕಾದಂಬರಿಯ ನಾಗವರ್ಮರು ಚಂದ್ರರಾಜರ ಆಶ್ರಿತರಾಗಿದ್ದಿರಬೇಕೆಂದೂ ಸೂಚಿಸಿರುತ್ತೇನೆ. ನಾಗವರ್ಮರು ಎಷ್ಟು ಮಂದಿ? ಎಂಬ ಲೇಖನವನ್ನು ಬರೆದು ಈಗ 15 ವರ್ಷಗಳಾದುವು. ಆದ ಕಾರಣ ವಿಷಯಗಳು ಈಗ ಮರೆತು ಹೋಗಿರುವುರಿಂದ ಆ ಲೇಖನವನ್ನು ತಿರು

ಗೊಮ್ಮೆ ಪರಿಶೀಲಿಸಿ ತಮಗೆ ಹೀಗೆ ತಿಳಿಸಿರುತ್ತೇನೆ. ನಾಗರಖಂಡವನ್ನು ಕುರಿತು ಆರಾರು ಬರೆದ ನೆನಪಿಲ್ಲ. ಹೈಗ, ಹೈವೆಯನ್ನು ಕುರಿತು ಬರೆದಿರುತ್ತೇನೆ. ಆ ಲೇಖದ ಪ್ರತಿಯನ್ನೂ ಕನ್ನಡ ನಾಟಕದ ಹಳಮೆ ಎಂಬ ಲೇಖದ ಬೇರೆ ಬೇರೆ ಪ್ರತಿಗಳನ್ನೂ ಇವತ್ತು ರಿಜಿಸ್ಟ್ರಿ ಬುಕ್‌ಪೋಸ್ಟ್ ದ್ವಾರಾ ತಮಗೆ ಕಳಿಸಿರುತ್ತೇನೆ.

ಸರಿ, ತಮ್ಮ ಸೂಚನೆಯ ಬಗ್ಗೆ ತಮಗೆ ತುಂಬ ಋಣಿಯಾಗಿರುತ್ತೇನೆ. ಇನ್ನು ಸಂಶೋಧಕ ಲೇಖನಗಳನ್ನು ಕಲೆಹಾಕಿ ಪ್ರಕಟಿಸಬೇಕೆಂದು ಮನಸ್ಸಿದೆ. ಆದರೆ ರವದಷ್ಟು ಬಿಡುವಿಲ್ಲದೆ ತುಂಬ ಬಳಲುತ್ತೇನೆ. ಏನು ಮಾಡಲಿ ? ನನ್ನ ಗ್ರಹಚಾರ.

ಇತಿ ನಮಸ್ಕಾರ

**ಟಿಪ್ಪಣಿ :** ಪತ್ರದಲ್ಲಿ ವರ್ಷದ ಉಲ್ಲೇಖ ಇಲ್ಲವಾದರೂ, ಶ್ರೀ ನಾಯಕರು, ೧೯೪೯ ಇರಬಹುದೆಂದು ತರ್ಕಿಸಿದ್ದಾರೆ. 'ನಾಗವರ್ಮರು ಎಷ್ಟು ಮಂದಿ ?' ಎಂಬ ಲೇಖವು ೧೯೩೫ರಲ್ಲ ಪ್ರಕಟಿತ (ಪರಿಷತ್ಪತ್ರಿಕೆಯಲ್ಲಿ).

೨೨

**ಅಮ್ಮೆಂಬಳ ಶಂಕರನಾರಾಯಣ ನಾವಡ** (ಕೋಟೆಕಾರು) ೧೯-೧೦-೪೯

ಗೋವಿಂದ ಪೈ ಮಾಡುವ ನಮಸ್ಕಾರ.

ತಮ್ಮ 'ಪ್ರಣಯ ದರ್ಶನ'ದ ಒಂದು ಪ್ರತಿಯನ್ನು ತಾವು ಪ್ರೀತಿಪೂರ್ವಕವಾಗಿ ಕೆಲ ತಿಂಗಳ ಹಿಂದೊಮ್ಮೆ ಕಳುಹಿಸಿ ಕೊಟ್ಟಂದು ಅದನ್ನು ಓದಿ, ಆ ಕುರಿತು ನನ್ನ ಅಭಿಪ್ರಾಯವನ್ನು ತಮಗೆ ಬರೆದು ತಿಳಿಸಿರುವಂತೆ ನನ್ನ ನೆನಪಿಗೆ ತೋಚುತ್ತದೆ, ಹೇಗೂ ಇರಲಿ. ಮೊನ್ನೆ ಮತ್ತೊಂದು ಪ್ರತಿಯನ್ನು ಕೊಟ್ಟಿರಿ, ಅದನ್ನೂ ಓದಿ ನೋಡಿದೆ. ಮೂರೂ ನಾಟಕಗಳು ಬಹಳ ಚಲೋದಿವೆ, ಪ್ರಯೋಗಿಸಲಿಕ್ಕೂ ಚೆನ್ನಾಗಿವೆ. ಮೂರನೆಯ ನಾಟಕದಲ್ಲಿ ಮೃಗಗಳು ಮಾತನಾಡುವಲ್ಲಿ ನನಗೆ ಅದೇನೂ ಕೊರತೆ ಎನಿಸುವುದಿಲ್ಲ. ಏಕೆಂದರೆ ಯೂರೋಪಿನ ಕೆಲವಾದರೂ ನಾಟಕಗಳಲ್ಲಿ ಮನುಷ್ಯೇತರ ಪ್ರಾಣಿಗಳು ಮಾತಾಡುತ್ತವೆ. ವಾಸ್ತವಿಕ ಜಗತ್ತನ್ನೇ ಅಲ್ಲ, ಕವಿ ಮಾನಸಿಕ ಜಗತ್ತನ್ನೂ ಚಿತ್ರಿಸಬೇಕು ; ಆ ಚಿತ್ರಣದಲ್ಲಿ ಮೃಗಗಳ ಆಲಾಪ ಹೇಯವೆಂದಾಗದು. ಈ ನಾಟಕಗಳನ್ನು ರಚಿಸಿ ಕನ್ನಡ ಸಾಹಿತ್ಯಕ್ಕೆ ಇತ್ತ ಬಗ್ಗೆ ತಮ್ಮನ್ನು ಅಭಿನಂದಿಸುತ್ತೇನೆ. ಇತೋಪ್ಯತಿಶಯವಾದ ಕೃತಿಗಳನ್ನು ತಾವು ಬರೆವಂತೆ ಶ್ರೀ ಪರಮಾತ್ಮನು ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ. ಇತಿ ಶಮ್.

೨೩

**ಸದಾನಂದ ನಾಯಕ** (ಹುಬ್ಬಳ್ಳಿ) ೨೩-೧೧- [?]

ಗೋವಿಂದ ಪೈ ಮಾಡುವ ನಮಸ್ಕಾರ. ತಮ್ಮ 10ನೆಯ ತಾರೀಖಿನ ಪತ್ರ ಇಲ್ಲಿ ನಿನ್ನೆ 22ನೆಯ ತಾರೀಕಿಗೆ ಮುಟ್ಟಿತು, ತಾವು ಸಿದ್ಧೇಶ್ವರವನ್ನೂ ಅಲ್ಲಿಯ

ನಾಗರಬೈಲು ಹಳೆಯ ರಾಜ್ಯದ ಬೋಳೆಯನ್ನೂ ಇತ್ಯಾದಿ ಬರೆದು ಕಳುಹಿಸಿದ ಬಗ್ಗೆ ತಮಗೆ ತುಂಬ ಕೃತಜ್ಞನಾಗಿರುತ್ತೇನೆ. ಅದು ನನಗೆ ಬಹಳ ಉಪಯೋಗಿಯಾಗಿದೆ.

1. ನಾಗರಖಂಡದಲ್ಲಿ 11-10ನೆಯ ಶತಮಾನಗಳಲ್ಲಿ ಚಂದ್ರನೆಂಬ ಅರಸನು ಆಳುತ್ತಿದ್ದಂತೆ ನನ್ನ ತಿಳಿವಳಿಕೆಗೆ ಬಂದಿಲ್ಲ. ನಾನು ತಮಗೆ ನಾಗವರ್ಮರು ಎಷ್ಟು ಮಂದಿ? ಎಂಬ ಲೇಖದ ಪ್ರತಿಗಳನ್ನು ಕಳಹಿಸಿರುತ್ತೇನಷ್ಟೆ. (ಕಳಿಸಿಲ್ಲವಾದರೆ ಹಾಗೆ ತಿಳಿಸಿದ ಪಕ್ಷದಲ್ಲಿ ಕೂಡಲೇ ಕಳಿಸಿಕೊಡಬಹುದು.) ಅವರಲ್ಲಿ (ಪದ್ಮಗುಪ್ತನ "ನವಸಾಹಸಾಂಕ"ಚರಿತದಲ್ಲಿಯ) ಶಶಿಖಂಡನೆಂಬವನನ್ನು ನಾನು "ಕಾದಂಬರಿ"ಯ ನಾಗವರ್ಮನ ಒಡೆಯನಾದ "ಚಂದ್ರ" ಎಂಬ ಅರಸನೊಡನೆ ಸಮೀಕರಿಸಿರುತ್ತೇನೆ. ಆತನಲ್ಲದೆ ಬೇರೆ ''ಚಂದ್ರ" ಎಂಬ ಅರಸನನ್ನು ನಾನರಿಯೆ,

2. ಯಕ್ಷರಿಗೆ ದೇವತೆಗಳಲ್ಲಿ ಒಂದು ಪದವಿಯನ್ನು ಆರ್ಯರ ಪುರಾಣಗಳಲ್ಲಿ ಇತ್ತಿರುವುದರಿಂದ ಅವರು ಪ್ರಾಯಶಃ ಆರ್ಯರಾಗಿರಬೇಕೆಂದು ನನಗೆ ತೋರುತ್ತದೆ. (ನಾನು ತಪ್ಪಿರಬಹುದು). ಕುಬೇರನ ಶಿಕ್ಷೆಗೆ ಪಾತ್ರನಾದ ಯಕ್ಷನು 'ರಾಮಗಿರ್ಯಾಶ್ರಮೇಷು,' ಅಂದರೆ ಈಗಣ ಮಧ್ಯ ಪ್ರಾಂತ್ಯದಲ್ಲಿ ಇದ್ದುದರಿಂದ ಅವರ ಜನ್ಮ ಭೂಮಿ ಮತ್ತೂ ಒಡಗಲಾಗಿ ಪ್ರಾಯಶಃ ಹಿಮವತ್ಪ್ರದೇಶದಲ್ಲಿ ಇದ್ದಿರಬೇಕೆಂದು ಊಹಿಸಬಹುದು. ಆದರೆ ಅವರ ಹೆಸರಿನ ಯಕ್ಷಗಾನವು ಕರ್ಣಾಟಕದಲ್ಲಿ ಇದ್ದಿರುವುದರಿಂದ ಅವರ ಬಳಕೆಯೂ ಪ್ರಭಾವವೂ ಇಲ್ಲಿಯ ವರೆಗೂ ಇದ್ದಿರಬೇಕು. ಹಾಗೆಯೇ ಅಲ್ಲಿಯ ವರೆಗೂ ಮುಟ್ಟಿರಲೂ ಬಹುದು. ಅವರು ಆರ್ಯರಲ್ಲವಾದರೆ ಆರ್ಯರಿಗಿಂತ ಹಿಂದೆ ಇಲ್ಲಿ ಇದ್ದವರಾಗಿರಬಹುದು. ಅಥವಾ ನಾಗಾನಂದ ನಾಟಕದಲ್ಲಿ ವಿದ್ಯಾಧರರೂ ಸಿದ್ಧರೂ ನಮ್ಮಂತೆಯೇ ಇರುವರಷ್ಟೇ! ಹಾಗೆಯೇ ಇವರೂ ನಮ್ಮವರಾಗಿರಲೂ ಬಹುದು. ಅದಕ್ಕಿಂತ ಹೆಚ್ಚಿಗೆ ಹೇಳಲಾರೆ. 5ನೆಯ ನಾಗವರ್ಮನನ್ನು ಕಂಡು ಹಿಡಿದುದರಲ್ಲಿ, ಪ್ರಾಯಶಃ ಶ್ರೀ (ವಿಶ್ವ ಕರ್ಣಾಟಕದ) ತಿರುಮಲೆ ತಾತಾ ಶರ್ಮರು ಬಳ್ಳಾರಿ ಜಿಲ್ಲೆಯ ಹಡಗಲಿ ತಾಲೂಕಿನ ಮೈಲಾರ ಗ್ರಾಮದ ಸೋಮಲಿಂಗೇಶ್ವರ ದೇವಾಲಯದಲ್ಲಿ ಕಾವ್ಯಬದ್ಧವಾದ್ದೊಂದು ಶಾಸನವಿದೆ. ಶಾ. ಶ. 968ನೆಯ ವರ್ಷದ್ದು. ಅಂದರೆ ಕ್ರಿ. ಶ. 1047ರದ್ದು. ಅದರ ಕವಿಯ ಹೆಸರು ನಾಗವರ್ಮ ಎಂದು. (Memoirs of the Archaeological Survey of India No. 13: Kannada poet mentioned in transcriptions, by T. T. Sharma.) ನಾನು ನಾಗವರ್ಮರು ಎಷ್ಟು ಮಂದಿ? ಎಂಬ ಲೇಖ ಬರೆದಾಗ ಶರ್ಮರ ಲೇಖವನ್ನು ಕಂಡಿರಲಿಲ್ಲ.

ಇತಿ

ಟಿಪ್ಪಣಿ: 'ಹೈವೆಯ ಐತಿಹ್ಯ'ವೆಂಬ ತಮ್ಮ ಲೇಖನಕ್ಕಾಗಿ ಶ್ರೀ ನಾಯಕರು ಕೇಳಿದ ಪ್ರಶ್ನೆಗಳಿಗೆ ಉತ್ತರ ಭಾಗಶಃ ಇಲ್ಲಿ ಬಂದಿದೆ. ಮೇಲೆ ಉಲ್ಲೇಖಿಸಿದ ೧೦ನೆಯ ದಿನಾಂಕದ ಪತ್ರ ಈಗ ಅ-ಲಭ್ಯ.

೨೪

**ಅಮ್ಮೆಂಬಳ ಶಂಕರನಾರಾಯಣ ನಾವಡ** (ಕೋಟೆಕಾರು) ೨೮-೬-೧೯೫೦

ಗೋವಿಂದ ಪೈ ಮಾಡುವ ನಮಸ್ಕಾರ

ತಮ್ಮ ನಿನ್ನೆಯ ಕಾರ್ಡು ಇವತ್ತು ಮುಟ್ಟಿತು. ತಮ್ಮ 'ಕುಮಾರ ಸಂಭವ'ಕ್ಕೆ ೨ನೆಯ ಮುದ್ರಣದ ಅವಕಾಶ ಒದಗಿರುವುದಕ್ಕಾಗಿ ತಮ್ಮನ್ನು ಅಭಿನಂದಿಸುತ್ತೇನೆ. ನನ್ನ ಮುನ್ನುಡಿ ಅದೊಂದೇ ಮುದ್ರಣಕ್ಕೆಂದು ಬರೆದುದಲ್ಲ. ಬೇಕಾದಷ್ಟು ಮುದ್ರಣಗಳಿಗೆ ಅದನ್ನು ಇಟ್ಟುಕೊಳ್ಳಬಹುದು. ಅಚ್ಚಿನಲ್ಲಿ ಕೊರತೆಗಳು ಬಾರದಂತೆ ಪ್ರೂಫನ್ನು ಅಲ್ಲಿಯೇ ತಿದ್ದಬಹುದಾದರೆ, ಅದನ್ನು ನನ್ನ ಬಳಿಗೆ ಕಳುಹಿಸಿ ಕೊಡಬೇಕೆಂದಿಲ್ಲ.

ಇತಿ ನಮಸ್ಕಾರ

೨೫

**ಮಾಸ್ತಿ ವೆಂಕಟೇಶ ಅಯ್ಯಂಗಾರ್** (ಬೆಂಗಳೂರು) ೨೧-೪-೧೯೫೧

ನಾನು ನಿನ್ನೆ ಇಲ್ಲಿ ಬಂದು ಮುಟ್ಟಿದೆ. ತಮ್ಮೊಂದಿಗೆ ಉಳಕೊಂಡ ಆ ಕೆಲವು ದಿನಗಳನ್ನ ನಾನು ಎಂದಿಗೂ ಮರೆಯುವಂತಿಲ್ಲ. ಅವನ್ನು ನನ್ನ ಜೀವಮಾನದಲ್ಲಿಯ ಸುಭಿಕ್ಷದ ದಿನಗಳೆಂದು ಭಾವಿಸುತ್ತೇನೆ. ತಮ್ಮ ಉದಾರವಾದ ಆದರಾತಿಥ್ಯಗಳ ಬಗ್ಗೆ ಸರ್ವದಾ ತಮಗೆ ಋಣಿಯಾಗಿರುತ್ತೇನೆ. ಹೆಚ್ಚೇನು ಬರೆಯಲಿ ?

ತಮಗೂ ತಮ್ಮ ಮನೆಯವರಿಗೂ ಮಕ್ಕಳಿಗೂ ನನ್ನ ಸೋದರಿಕೆಯ ನಮಸ್ಕಾರಗಳು. ಶ್ರೀಗಳಾದ ಶೇಷಾದ್ರಿ, ರಂಗಸ್ವಾಮಿ, ರಾಮರಾಜ ಅಯ್ಯಂಗಾರರವರಿಗೂ. ಶ್ರೀಸುಬ್ರಹ್ಮಣ್ಯ ಅಯ್ಯರರಿಗೂ ನನ್ನ ಸೋದರತನದ ನಮಸ್ಕಾರಗಳನ್ನು ತಿಳಿಸಬೇಕಾಗಿ ಪ್ರಾರ್ಥಿಸುತ್ತೇನೆ.

ಇತಿ ತಮ್ಮವ

೨೬

**ಸಮೇತನಹಳ್ಳಿ ರಾಮರಾವ** (ಬೆಂಗಳೂರು) ೧೨-೧-೫೨

ಗೋವಿಂದ ಪೈ ಮಾಡುವ ನಮಸ್ಕಾರ.

ತಮ್ಮ ಹತ್ತನೆಯ ತಾರೀಕಿನ ಕಾರ್ಡು ಇವತ್ತು ಮುಟ್ಟಿತು. ತಾವು ಅಪೇಕ್ಷಿಸಿರುವ ಮೇರೆಗೆ ಕೈ. ವಾ. ಮುಳಿಯ ಶಂಕರ ಭಟ್ಟರ ಶ್ರೀ ರಾಮಾಶ್ವಮೇಧದ ಹೊಸ ಕನ್ನಡ ಪರಿವರ್ತನೆಯನ್ನು ಇವತ್ತು ರಿಜಿಸ್ಟರ್ಡ್ ಬುಕ್‌ಪೋಸ್ಟ್ ದ್ವಾರಾ ತಮಗೆ ಕಳುಹಿಸಿರುತ್ತೇನೆ. ತಮ್ಮ ಕೆಲಸ ಮುಗಿಯುತ್ತಲೇ ಅದನ್ನು ಇತ್ತ ಕಡೆಗೆ ಮರಳಿ ಕಳಿಸಿಕೊಡಿರಿ. ತುಂಬ ಉಪಕಾರ. ಅದರ ಬೇರೆ ಪ್ರತಿ ಇಲ್ಲಿ ನಾನು ಬಲ್ಲಷ್ಟರ ಮಟ್ಟಿಗೆ ಎಲ್ಲಿಯೂ ಇಲ್ಲ, ಶ್ರೀ ಶ್ರೀ ಶ್ರೀ ಭಟ್ಟರು ಮೂಲದಲ್ಲಿ ಅವರಿಗೆ

ಅರ್ಥವಾಗದ ಶಬ್ದಗಳಿಗೆ ಪರಿವರ್ತನದಲ್ಲಿ ಅವೇ ಶಬ್ದಗಳನ್ನು ಉಪಯೋಗಿಸುತ್ತಾರೆ. ಅನಿವಾರ್ಯವಾದ ಎಡೆಗಳಲ್ಲಿ ಹೀಗೆ ಮಾಡದೆ ಗತ್ಯಂತರವಿಲ್ಲವಾದರೂ ಎಲ್ಲಾ ಎಡೆಗಳಲ್ಲಿ ಹಾಗೆ ಮಾಡಿದರೆ ಸಾಧುವೆನಿಸದು. ಅದಲ್ಲದೆ ಪರಿವರ್ತನವೆಂದರೆ ಶಬ್ದಕ್ಕೆ ಶಬ್ದದಂತೆ ಇರಿಸಬೇಕಲ್ಲದೆ ಒಂದು ಶಬ್ದಕ್ಕೆ ಹಲವು ಶಬ್ದಗಳನ್ನು ಕೊಡಬಾರದು. ಅದು ಪರಿವರ್ತನವಲ್ಲ. 'ದಂಡಾನ್ವಯ' (Paraphrase) ಆಯಿತು. ತಮ್ಮದರಲ್ಲಿ ನಾನು ಕಂಡಿರುವಲ್ಲಿ ಒಂದೆರಡು ಸಾರಿ ಹಾಗಾಗಿದೆ. ಇನ್ನು ಹಾಗಾಗದಂತೆ ಜಾಗ್ರತೆಯಾಗಿ ನೋಡಿಕೊಂಡರೆ ಲೇಸು. ತಾವು ಕೈಗೊಂಡಿರುವ ಉದ್ಯೋಗದಲ್ಲಿ ಶ್ರೀದೇವರು ತಮ್ಮನ್ನು ಬೆಂಬಲಿಸಿ ಅದನ್ನು ಯಶಸ್ವಿಯಾಗಿ ಕೊನೆಗಾಣಿಸಲಿ ಎಂದು ಆತನಲ್ಲಿ ಪ್ರಾರ್ಥಿಸುತ್ತೇನೆ.

ಇತಿ ನಮಸ್ಕಾರ

೨೭

**ಅಮ್ಮೆಂಬಳ ಶಂಕರನಾರಾಯಣ ನಾವಡ** (ಕೋಟೆಕಾರು) ೨೦-೧-೧೯೫೨

ಗೋವಿಂದ ಪೈ ಮಾಡುವ ನಮಸ್ಕಾರ.

ತಮ್ಮ ಶಾಲೆಯ ವರ್ಧಂತಿಯ ಬಗ್ಗೆ ತಾವು ಪ್ರೀತಿಪೂರ್ವಕವಾಗಿ ಕಳುಹಿಸಿರುವ ಆಮಂತ್ರಣ ಪತ್ರಿಕೆ ಕೈ ಸೇರಿ ತಮಗೆ ತುಂಬ ಕೃತಜ್ಞನಾಗಿರುತ್ತೇನೆ. ಈ ಉತ್ಸವವು ಯಶಸ್ವಿಯಾಗಿ ಜರಗುವಂತೆಯೂ, ತಮ್ಮ ಶಾಲೆ ವರ್ಷೇ ವರ್ಷೇ ನೂರಾರು ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೆ ವಿದ್ಯಾದಾನ ಮಾಡುತ್ತ ಉತ್ತರೋತ್ತರವಾಗಿ ಚಿರಕಾಲ ಬಾಳುವಂತೆಯೂ ಶ್ರೀದೇವರು ಅನುಗ್ರಹಿಸುತ್ತಿರಲೆಂದು ಪ್ರಾರ್ಥಿಸುತ್ತೇನೆ.

ಇತಿ ನಮಸ್ಕಾರ

೨೮

**ರಂ. ಶ್ರೀ. ಮುಗಳಿ** (ಸಾಂಗ್ಲಿ) ೨೫-೧-೧೯೫೨

ಗೋವಿಂದ ಪೈ ಮಾಡುವ ನಮಸ್ಕಾರ.

ತಮ್ಮ ೨೨ನೆಯ ತಾರೀಖಿನ ಕಾರ್ಡು ಇವತ್ತು ಮುಟ್ಟಿ ಆ ಬಗ್ಗೆ ತಮಗೆ ಧನ್ಯವಾದಗಳನ್ನು ಸಲ್ಲಿಸುತ್ತೇನೆ. ಶಿಶುಮಾಯಣನನ್ನು ಕುರಿತು ತಾವು ಮಂಗಳೂರಿನ ಸ್ವದೇಶಾಭಿಮಾನಿಯ ರಜತೋತ್ಸವ ಸಂಚಿಕೆಯಲ್ಲಿ (೧೯೩೧) ಬರೆದ ಲೇಖದ ಹೆಚ್ಚಿಗೆ ಪ್ರತಿಗಳನ್ನವರು ನನಗೆ ಕಳುಹಿಸಿಕೊಡಲಿಲ್ಲ. ಆ ಸಂಚಿಕೆಯ ಪ್ರತಿಯೊಂದರಲ್ಲಿ ನನಗೆ ಕಳುಹಿಸಿಕೊಡುವ ಮುಂಚೆ ಆ ಲೇಖವುಳ್ಳ ಅದೋದು ಅಚ್ಚಾದ ಹಾಳೆಯನ್ನು ನನಗೆ ಕಳುಹಿಸಿದ್ದರು. ಅದು ನನ್ನೊಂದಿಗೆ ಇದೆ. ಅದನ್ನು ಇವತ್ತು unregd. ಬುಕ್‌ಪೋಸ್ಟ್ ದ್ವಾರಾ ತಮಗೆ ಕಳುಹಿಸಿರುತ್ತೇನೆ. ಅದು ತಮ್ಮ ಕೈ ಸೇರುತ್ತಲೇ ನನಗೆ ಆ ಕುರಿತು ಒಂದು ಬಂತಿಯನ್ನು ಬರೆದು ಕಳುಹಿಸುವುದು ಅಲ್ಲದೆ ತಮ್ಮ ಕೆಲಸ ತೀರುತ್ತಲೆ ಅದನ್ನು ದಯಮಾಡಿ ನನಗೆ ಭದ್ರವಾಗಿ ಮರಳಿ ಕಳುಹಿಸಿ

ಕೊಡುವ ಉಪಕಾರವನ್ನು ಮಾಡಬೇಕಾಗಿ ಅಪೇಕ್ಷಿಸುತ್ತೇನೆ. ಏಕೆಂದರೆ ಆ ಸಂಚಿಕೆಯ ಪ್ರತಿ ಒಂದೇ ಒಂದಲ್ಲದೆ ಆ ಲೇಖದ ಇದೊಂದೇ ಹೆಚ್ಚಿಗೆ ಪ್ರತಿ ನನ್ನೊಂದಿಗಿದೆ. ಈಗ ತಾವು ಕೇಳಿರುವಂತೆ ಯಾರಾದರೂ ಕೇಳಿದರೆ ಎರವಾಗಿ ಕೊಡಲಿಕ್ಕೆ ಇದೊಂದೆ. ಬೇರೆ ಪ್ರತಿ ಇಲ್ಲ-ತಾವು ಬರೆಯಲಿಕ್ಕೆ ಕೈಯ್ಕೊಂಡ ಕನ್ನಡ ಸಾಹಿತ್ಯ ಚರಿತೆ ಯಶಸ್ವಿಯಾಗಿ, ಕೊನೆಗಾಲ ಇರುವಂತೆ ಶ್ರೀದೇವರು ಅನುಗ್ರಹಿಸಲಿ. ಮುಂಬಯಿಯಿಂದ ಮರಳಿದಂದಿನಿಂದ ನನ್ನ ಆರೋಗ್ಯ ಸರಿಯಾಗಿಲ್ಲದೆ, ಏನನ್ನೂ ಬರೆದಿಲ್ಲ.

ಇತಿ ನಮಸ್ಕಾರ

೨೯

ರಂ. ಶ್ರೀ. ಮುಗಳಿ (ಸಾಂಗ್ಲಿ) ೨೫-೩-೧೯೫೨

ಗೋವಿಂದ ಪೈ ಮಾಡುವ ನಮಸ್ಕಾರ. ತಮ್ಮ ೮ನೆಯ ತಾರೀಖಿನ ಕಾರ್ಡು ಮುಟ್ಟಿದೆ. ಅದರಲ್ಲಿ ತಾವು ಶಿಶುಮಾಯಣನ ಅಂಜನಾ ಚರಿತ್ರೆಯಿಂದ ಎತ್ತಿಕೊಂಡು ಈ ಸಾಂಗತ್ಯಕ್ಕೆ

> ಉತ್ತರ ದೇಶದೊಳಗೆ ಸುರುತ್ರಾಣನ
> ಪತ್ತಣವಾದ (ವನು) ಬಿದಿರೆಯೊಳು ।
> ಕರ್ತಾರನಲ್ಲದುಳಿದ ದೈವವಿಲ್ಲೆಂದು
> ಮತ್ತರಾಗಿರುತಿಹರಲ್ಲಿ ॥ ೪೭ ॥

ನನಗೆ ನೇರಾಗಿ ಅರ್ಥವಾಗುವುದಿಲ್ಲವಾದರೂ (ಏಕೆಂದರೆ ಕರ್ತಾರನಲ್ಲದುಳಿದ, ದೈವವಿಲ್ಲೆಂದು' ?, ಯಾರು " ಮತ್ತರಾಗಿರುತಿಹರು " ಯಾರು ?), ಅದರಲ್ಲಿಯ 'ಬಿದಿರೆ' ಯೆಂದರೆ, ಪ್ರಾಯಶಃ ನಮ್ಮ ತುಳುನಾಡಿನ ಮೂಡಬಿದರೆಯಲ್ಲ. ಆ ಊರು ಹೈದರಾಬಾದು ಸೀಮೆಯೊಳಗೆ ಇದೆಸೋ; ಬೀದರ್ ಆಗಿರಬೇಕೆಂದು ನನಗೆ ಕಾಣುತ್ತದೆ. ಈ ನನ್ನ ಊಹೆ ಸರಿಯಾದರೆ ಆ ಕುರಿತು ಇವೆರಡು ಪುಸ್ತಕಗಳಿಂದ ನಾನು ಸಂಗ್ರಹಿಸಿರುವ [viz., (1) 'Junior History of India' by R. D. Banerji (ಪುಟ 150–153) Published by Blackie and son, 1930, ಮತ್ತು (2) 'Medieval India under Mohammedan Rule A.D. 712-1764' by Stanley Lane Poole, pub by J. Fisher Unwin, in the 'Story of the Nations' series [ಪುಟ 179 ಮತ್ತು 185) 1903! ಈ ಮಾತುಗಳನ್ನೆಲ್ಲಾ ಆ ಕುರಿತ ನನ್ನ ಅನುಮಾನಗಳನ್ನು ಇಲ್ಲಿ ಹೇಳುತ್ತೇನೆ.—In 1347, Zafar Khan founded a kingdom in south India and making Devagiri or Daulatabad its capital, he assumed the title

Alauddin Hasan Gangu Bahumani. Thus he was the founder of the Bahumani dynasty. He transferred his capital to Gulbarga. He died in 1358. At the end of the 15th century, the Bahumani Kings were obliged to transfer their capital from Gulbarga to Bidar (ಬೀದರ್). Soon after 1481, with the death of Mahmud Gawan, who was an excellent minister and had carried on the administration of the Bahumani's empire for a quarter of century, that empire was divided into five great provinces, each of which was hence forth ruled over by a separate dynasty. viz. (1) Adil Shahis of Bijapur 1489-1686, (2) Kutb Shahis of Golkonda 1512-1687, (3) Nizam Shahi's of Ahmadnagar 1490-1595, (4) Barid Shahi's of Bidar 1492—about 1609 and (5) Imam Shahis of Berar 1484-1572. ಇದರಿಂದ ನನ್ನ ಅನುಮಾನವೇನೆಂದರೆ ಕ್ರಿ.ಶ. 1492 ರಲ್ಲಿ ಬೀದರವು ಬರೀದ ಶಾಹೀ ವಂಶದವರ ವಶವಾಗಿ, ಅವರು ಅಲ್ಲಿ ತಮ್ಮ ಸ್ವತಂತ್ರವಾದ ರಾಜ್ಯವನ್ನು ಸ್ಥಾಪಿಸಿ, ಅದನ್ನು ತಮ್ಮ ರಾಜಧಾನಿಯಾಗಿಸಿಕೊಂಡರು. ಅವರೆಗೆ ಬೀದರೆಯು ಮೂಲ ಬಹುಮನೀ ಸುಲತಾನರ ರಾಜಧಾನಿಯಾಗಿತ್ತು. ಬೀದರವು ಬಹುಮನಿ ಯವರ ರಾಜ್ಯ ಒಡೆದು ಐದು ಭಾಗವಾಗಿ, ಅಲ್ಲಿ ಬರೀದಶಾಹಿಯ ವಂಶದವರ ರಾಜ್ಯ ಸ್ಥಾಪನೆಯಾಗುವ ಕಾಲಕ್ಕೆ **ಅಂದರೆ ಕ್ರಿ.ಶ. 1492ರ ನೆರೆಯಲ್ಲಿ ಶಿಶುಮಾಯಣನು ತನ್ನ ಅಂಜನಾ ಚರಿತ್ರವನ್ನು ರಚಿಸಿರಬಹುದೇನೋ** ಎಂದು ನನ್ನ ಊಹೆ. ಅದಕ್ಕಿಂತ ಹೆಚ್ಚಿನ ಅರ್ಥವನ್ನು ಅರ್ಥಕ್ಕೆ ಬಾರದ ಈ ಸಾಂಗತ್ಯದಿಂದ ಹೊರಡಿಸಲಿಕ್ಕೆ ನನ್ನಿಂದ ಆಗುವುದಿಲ್ಲ.

ಇತಿ ನಮಸ್ಕಾರ

P.S. ದಯಮಾಡಿ ಕ್ಷಮಿಸುವುದು. ಅವಸರದಲ್ಲಿ ಈ ಪತ್ರವನ್ನು ಬರೆಯಬೇಕಾಗಿ, ಅಲ್ಲಲ್ಲಿ ಹೊಡೆಯಬೇಕಾಗಿದೆ.

೩೦

**ಮುನಿಸಾಲ ರಾಜು** (ಮಂಗಳೂರು) ೯-೬-೫೨

ಗೋವಿಂದ ಪೈ ಮಾಡುವ ನಮಸ್ಕಾರ. ತಾವು ಪ್ರೀತಿಪೂರ್ವಕವಾಗಿ ಮರಳಿ ಕಳುಹಿಸಿಕೊಟ್ಟ ನನ್ನ ಭಾಷಣದ ಹಸ್ತಪ್ರತಿ ಇವತ್ತು ಮುಟ್ಟಿ ಆ ಬಗ್ಗೆ ಧನ್ಯವಾದ ಗಳು. ತಾವು ಅದಕ್ಕೆ ಹನ್ನೊಂದಾಣೆಯ ಟಪ್ಪಾಲು ಚೀಟುಗಳನ್ನು ಅಂಟಿಸಿ ವೃಥಾ ಹಣವನ್ನು ವೆಚ್ಚ ಮಾಡಿದಿರಿ. ಅದನ್ನು ಅಷ್ಟು ಭದ್ರವಾಗಿ ಕಳುಹಿಸಬೇಕಾ

ದರೆ, ಬರೇ ಮೂರು ಆಣೆಗಳ ಚೀಟು ಸಾಕಿತ್ತು-ಒಂದಾಣೆಯ ಚೀಟು Book Post ಗೆ ಮತ್ತು ಎರಡಾಣೆಯ ಚೀಟು Express Deliveryಗೆ-ಇನ್ನಾದರೂ ನೆನಪಿರಲಿ. ನಾನದನ್ನು ಇವತ್ತು ಧಾರವಾಡಕ್ಕೆ "ಜಯಕರ್ನಾಟಕ"ದ ಆಫೀಸಿಗೆ ಕಳುಹಿಸಿಕೊಟ್ಟಿರುತ್ತೇನೆ. ಹಾಗೂ ಆ ಭಾಷಣದ 10-15 ಹೆಚ್ಚಿಗೆ ಪ್ರತಿಗಳನ್ನೂ ಆ ಸಂಚಿಕೆಯ ಒಂದು ಹೆಚ್ಚಿನ ಪ್ರತಿಯನ್ನೂ ಕಳುಹಿಸಬೇಕೆಂದು ಬರೆದಿರುತ್ತೇನೆ. ಆ ಹೆಚ್ಚಿನ ಸಂಚಿಕೆಗಳ ಪ್ರತಿ ತಮ್ಮ ಬಗ್ಗೆ.

ಇತಿ ನಮಸ್ಕಾರ

೩೧

**ಅಮ್ಮೆಂಬಳ ಶಂಕರನಾರಾಯಣ ನಾವಡ** (ಕೋಟೆಕಾರು) ೧೨-೬-೫೨

ಗೋವಿಂದ ಪೈ ಮಾಡುವ ನಮಸ್ಕಾರ.

ತಮ್ಮ ತಾರೀಕು ಇಲ್ಲದ ಕಾರ್ಡು ಇವತ್ತು ಮುಟ್ಟಿತು. ನನ್ನ 'ಕನ್ನಡಿಗರ ತಾಯಿ' ಯಲ್ಲಿ – (೧) "ಎನಿತೊ ಹಳೆಯ ಕಾಲದಿಂದ ಬರ್ದಿಲವಿೂ ಬಾಸೆಯಿಂದ ಕಾಲನ ಮೂದಲಿಸಿ ನಿಂದ ನಿನಗೆ ಮರವೆ ಹೊದೆವುದೇ ?" ಎಷ್ಟೋ ಪ್ರಾಚೀನ ಕಾಲದಿಂದ ನಿನ್ನ ಅಮರ (ಬರ್ದಿಲ-ಮರಣವಿಲ್ಲದ) ವಾದ ಕನ್ನಡ ಭಾಷೆಯಿಂದ ಕಾಲನನ್ನು ಅಣಕಿಸಿ ನಿಂದಿರುವ ನಿನಗೆ ತಾಯೀ, ನಿನಗೆ ಮರವೆ ತಟ್ಟೀತೇ ? (೨) ''ಶರ್ವ'' ಎಂದರೆ ಕನ್ನಡ ಕವಿರಾಜ ಮಾರ್ಗವನ್ನು ರಚಿಸಿದವನೆಂಬ 'ನೃಪತುಂಗ' (ಹಾಗೂ ಅಮೋಘವರ್ಷ) ಎಂಬ ಬಿರುದಿದ್ದ ಅರಸನು (ಕ್ರಿ. ಶ. 814-877) ಆತನ ನಿಜ ನಾಮಧೇಯ 'ಶರ್ವ' ಎಂದು ಆತನ ಹಲವು ಶಾಸನಗಳಿಂದ ತಿಳಿಯುತ್ತದೆ. (೩) (ಮೃಗದ) ಸೇಡು= (ಮೃಗದ) ಸಂಕೋಚ, ಭೀತಿ, ಅಧೈರ್ಯ. ತನ್ನಲ್ಲಿ ರುವ ಕಸ್ತೂರಿಯನ್ನು ಅರಿಯದೆ ಅದನ್ನು ಹೊರಗೆ ಹುಡುಕಾಡುವ ಅಜ್ಞಾನ, ಹಾಗೂ ಅದರಿಂದ ತನ್ನಲ್ಲಿ ಹುಟ್ಟುವ ಸಂಕೋಚ. (೪) ನಲ್ವ=೪೦೦ ಮೊಳ ದಷ್ಟು ಉದ್ದ. (ಕಿಟ್ಟೆಲ್ ಕೋಶ ೮೪೬).

ರನ್ನನ ಗದಾಯುದ್ಧದಲ್ಲಿಯ 'ಲಕ್ಷ್ಮೀವಿಡಂಬನ'ದಿಂದ-ಬಹಳ ಹಳೆಗಾಲದಲ್ಲಿ ಮೊಗ ನೋಡುವ ಕನ್ನಡಿಯೆಂದರೆ ಈಗಿನಂತೆ ಪಾದರಸ ಬಳಿದ ಗಾಜಿನ ತುಂಡಲ್ಲ. ಬಹಳ ನಯವಾಗಿ ನುಣುಪಾಗಿ ತಿಕ್ಕಿದ ಕಂಚಿನ ತಗಡು. ಅದಕ್ಕೆ ದರ್ಪಣವೆನ್ನುತ್ತಾರೆ. (ಹಳೆಯ ದೇವಾಲಯಗಳಲ್ಲಿ ಇಲ್ಲಿ ಈಗಲೂ ಅಂಥಾ ಕಂಚಿನ ದರ್ಪಣಗಳಿವೆ). ಅದಕ್ಕೆ ನೀರು ಮುಟ್ಟಬಾರದು. ಮುಟ್ಟಿದರೆ ಆ ಜಾಗದಲ್ಲಿ ಕಿಲುಬು ಹಿಡಿಯು ತ್ತದೆ. ಅದನ್ನೇ ಇಲ್ಲಿ ರೂಪಕೋಕ್ತಿಯಲ್ಲಿ ಹೇಳಿದೆ, 'ಪತ್ರ ಶತಕರ ಕರಶಾಖಂ?' ಎಂಬುದರ ಅರ್ಥವಾಗುವುದಿಲ್ಲ. ಅಚ್ಚಿನಲ್ಲಿ (ಅಥವಾ ಅಚ್ಚಿಗೆ ಆಧಾರವಾಗಿಟ್ಟು ಕೊಂಡ ಪ್ರತಿಯಲ್ಲಿ) ಎಡಹಿರಬಹುದೇನೋ.

ಇತಿ ನಮಸ್ಕಾರ

**ಕು. ಶಿ. ಹರಿದಾಸಭಟ್ಟ** (ಉಡುಪಿ) ೨-೯-೫೨

ಗೋವಿಂದ ಪೈ ಮಾಡುವ ನಮಸ್ಕಾರ. ತಮ್ಮ ನಿನ್ನೆಯ ಪತ್ರ ಇವತ್ತು ಮುಟ್ಟಿತು. ಧನ್ಯವಾದಗಳು. ಶ್ರೀ ಶ್ರೀ ಐರೋಡಿ ಶಿವರಾಮಯ್ಯನವರು ಶ್ರೀ ಶ್ರೀ ನಂದಳಿಕೆಯವರ ಮೇಲೆ ಬರೆದ ಲೇಖ ಮಂಗಳೂರಿನ "ಸುವಾಸಿನಿ"ಯ 1925-26ನೆಯ 3 ಸಂಪುಟದ (1) ನವಂಬರದ (1925) 3ನೆಯ ಸಂಚಿಕೆಯಲ್ಲಿ (ಪುಟ 62-?) ಮತ್ತು (2) ದಶಂಬರದ (1925)ನೆಯ 4ನೆಯ ಸಂಚಿಕೆಯಲ್ಲಿ (ಪುಟ 115-120?) ಪ್ರಕಟವಾಗಿದೆ. (ಅದೇ ಸಂಪುಟದ 1925ನೆಯ ಎಪ್ರಿಲಿನ 8ನೆಯ ಸಂಚಿಕೆಯಲ್ಲಿ (ಪು. 229-30) ವಾಙ್ಮಯ ಸೇವಕ ಎಂದು ಯಾರೋ ಒಬ್ಬ ಲೇಖಕರು ನಂದಳಿಕೆಯವರನ್ನು ಕುರಿತು ಬರೆದ "ಅಭಿಪ್ರಾಯ" ಎಂಬ ಚಿಕ್ಕ ಲೇಖವೂ ಇದೆ. (ಈ ಲೇಖದಲ್ಲಿ ಅವರ ಬಗೆಗೆ ಏನೂ ಇಲ್ಲ. ಅವರು ದಿವಂಗತ ರಾದ ಹಲವು ವರ್ಷಗಳ ಬಳಿಕ ಕನ್ನಡ ನಾಡಿದಲ್ಲಿ ಅವರ ಹೆಸರಿಗಾದ ಮನ್ನಣೆ ಯನ್ನು ಕುರಿತಷ್ಟೇ ಇದೆ). ಆ ಸುವಾಸಿನಿಯ 3ನೆಯ ಸಂಪುಟದ half-bound ಪ್ರತಿ ನನ್ನೊಂದಿಗಿದೆ. ಐರೋಡಿಯ ಲೇಖವಿರುವ ಸಂಚಿಕೆಗಳಷ್ಟೇ ಬಿಡಿಪ್ರತಿಗಳು ಬೇರೆ ಇಲ್ಲ. ಆ ಇಡೀ ಸಂಪುಟ ತಕ್ಕಷ್ಟು ಭಾರವಿದೆ. ಇಲ್ಲಿಂದ ಕಳುಹಿಸುವುದಕ್ಕೆ ಮನಸ್ಸು ಸಂಕುಚಿಸುತ್ತದೆ. ಏಕೆಂದರೆ ನನ್ನೊಂದಿಗೆ ಇರುವುದು ಅದೊಂದೇ ಪ್ರತಿ. ಅದನ್ನು ಹೊರಗೆ ಕೊಟ್ಟು ಅದು ಮರಳಿ ಮನೆ ಸೇರದಿದ್ದರೆ ? ಅದರೂ ತಾವಾ ದರೋ ಹೊರನಾಡಿಗೆ ಕಳುಹಿಸಿ ಕೊಡದೆ ಅದರಲ್ಲಿ ತಮಗೆ ಬೇಕಾದ ವಿಷಯವನ್ನು ಸಂಪ್ರತಿಸಿ, ಆದಷ್ಟು ಬೇಗನೆ ನನಗೆ ಮರಳಿ ಕಳುಹಿಸಿ ಕೊಡುವಿರಾದರೆ ತಮಗೆ ಕಳುಹಿಸಿಕೊಡಬಹುದು. ಆ ಕುರಿತು ತಮ್ಮ ಕಂಡಿತವಾದ ಭರವಸೆ ದೊರೆಯುತ್ತಲೆ ಅದನ್ನು ತಮಗೆ ರಿಜಿಸ್ಟ್ರಿ ಬುಕ್‌ಪೋಸ್ಟ್ ದ್ವಾರಾ ಕಳುಹಿಸಿಕೊಡುವೆನು. ಶ್ರೀ ತೀ. ನಂ. ಶ್ರೀಕಂಠಯ್ಯನವರ **ಭಾ**ರತೀಯ ಕಾವ್ಯಮೀಮಾಂಸೆಯನ್ನು ನಾನು ಕಂಡಿಲ್ಲ. ಶ್ರೀ ಕೃಷ್ಣನ ಕೊನೆಯ ದಿನವನ್ನು ಕುರಿತು ನಾನು ಬರೆಯ ಬಗೆದ ಪ್ರಭಾಸ ಎಂಬ ಖಂಡಕಾವ್ಯವನ್ನು ಕುರಿತು ಕೇಳಿರುವಿರಾದರೆ ಇಂದಿಗೆ 5–6 ವರ್ಷಗಳ ಕೆಳಗೆ ಅದರ ಸು. 150–200 ಪಂಕ್ತಿಗಳನ್ನು ಬರೆದು ಎಲ್ಲಿ ನಿಲ್ಲಿಸಿದೆನೋ ಅಲ್ಲೇ ಇದೆ. ಆತನದನ್ನು ನನ್ನಿಂದ ಎಂದು ಮುಗಿಸಿಕೊಳ್ಳು ವನೋ ಆತನೇ ಬಲ್ಲ.

ಇತಿ ನಮಸ್ಕಾರ

೩೩

**ರಂ. ಶ್ರೀ. ಮುಗಳಿ** (ಸಾಂಗ್ಲಿ) ೧೭-೯-೫೨

Dear Sri Mugali,

Many thanks to you for the copy of the late Sr. Pejawar

Sadashiva Rao's book of poems, ವರುಣ which you have so kindly sent me. I went through it so eagerly. All the poems are very fine and some of them are among the best in modern Kannada Poetry. I congratulate the poet in spirit he was nipped in the bud ! All through his short life, I am extremely sorry to say, I never met him but I read some of his poems published here and there, when he was yet alive. How fortunate I would have considered myself, if only I had seen him once and exchanged a couple of words with him! All that I can say of them, now that he is no more with us, is whom the gods love die young or the meteor is finer than the star. ಓಂ ಶಾಂತಿಃ ಶಾಂತಿಃ ಶಾಂತಿಃ

Thanking you again and with best wishes and loving regards,

Yours very faithfully

೩೪

ಮುನಿಪಾಲ ರಾಜು (ಮಂಗಳೂರು) ೨೧-೧-೫೩

ಗೋವಿಂದ ಪೈ ಮಾಡುವ ನಮಸ್ಕಾರ.

ತಮ್ಮ ಕಾರ್ಡು ನಿನ್ನೆ ಮುಟ್ಟಿತು. ನಾನು ಈಗ ಎಲ್ಲಿಗೂ ಹೋಗುವುದಿಲ್ಲ. ಯಾವ ಬಗೆಯ ಹೊಣೆಗಾರಿಕೆಯ ಕೆಲಸವನ್ನೂ ಒಪ್ಪಿಕೊಳ್ಳುವುದಿಲ್ಲ. ಆಕಾರಣ' ನನ್ನನ್ನು ದಯಮಾಡಿ ಕ್ಷಮಿಸಬೇಕೆಂದು ಅಪೇಕ್ಷಿಸುತ್ತೇನೆ. ಅಥವಾ ನಾನು ಮುದ್ದಣನನ್ನು ಅಂದರೆ ನಂದಳಿಕೆಯ ಲಕ್ಷ್ಮೀನಾರಣಪ್ಪರನ್ನು ಸ್ವತಃ ಕಂಡವನಲ್ಲವಾದುದರಿಂದ ಒಂದು ವೇಳೆ ಬಂದರೂ ನಾನು ಓದುವುದೆಂದರೆ ನೂತನ ಪ್ರೌಢ ಪಾಠಾವಳಿಕೆಯ (Basel Mission Book Depot, Mangalore ; edited by Sri Damodar Baliga) IV ಫೋರ್ಮಿನವರ ಪಠ್ಯಪುಸ್ತಕದಲ್ಲಿ (ಪು. 57-67) ಪ್ರಕಟವಾದ ಮಹಾ ಕವಿ ನಂದಳಿಕೆ ಲಕ್ಷ್ಮೀನಾರಣಪ್ಪ ಎಂಬ ಈ ಲೇಖನವನ್ನೇ. ಅದಕ್ಕಿಂತ ಅವರನ್ನು ಕುರಿತು ನಾನರಿಯೆ. ಆದ ಕಾರಣ ಅವರನ್ನು ಕಂಡು ಮಾತನಾಡಬಲ್ಲ ಹುರುಳಿ ಭೀಮ ರಾಯರನ್ನು ಅಧ್ಯಕ್ಷರಾಗಿಸಿದರೆ ಎಷ್ಟೋ ಲೇಸು. ದಯಮಾಡಿ ನನ್ನನ್ನು ಕ್ಷಮಿಸಿರಿ. 'ರತ್ನಾವತೀ ಕಲ್ಯಾಣ' ಮತ್ತು 'ಕುಮಾರ ವಿಜಯ'ವನ್ನು ರಚಿಸಿದುದು 1889 ಮತ್ತು 1892ರ ನಡುವೆ ಎಂದು ನನ್ನ ನೆನಪು. ಅವುಗಳು

ಮರಳಿ ಅಚ್ಚಾಗಿ ಪ್ರತಿಗಳು ಪೇಟೆಯಲ್ಲಿ ಕ್ರಯಕ್ಕೆ ಸಿಗುತ್ತವೆ. ಆದರಲ್ಲಿ ನೋಡಿ, ಮೊದಲನೆಯ ಆ ಪ್ರತಿ ಯಾವ ಯಾವ ಇಸವಿಗಳಲ್ಲಿ ಅಚ್ಚಾಯಿತೆಂದು.

ಇತಿ ನಮಸ್ಕಾರ

೩೫

**ತರುಣ ಕಲಾವೃಂದ** (ಮಂಗಳೂರು) ೧೫-೨-೧೯೫೩

ಪ್ರಿಯರೆ,

ಗೋವಿಂದ ಪೈ ಮಾಡುವ ನಮಸ್ಕಾರ. ನಿಮ್ಮ 'ತರುಣ ಕಲಾವೃಂದ'ದವರು ನಾಡಿದ್ದು ಫೆಬ್ರುವರಿ ೨೭ನೆಯ ತಾರೀಕಿನಂದು ಕರ್ಣಾಟಕ ಕವಿ ಶ್ರೇಷ್ಠನಾದ ಮುದ್ದಣನ 'ಪುಣ್ಯತಿಥಿ'ಯನ್ನು ಆಚರಿಸಲಿಕ್ಕಿರುವಿರೆಂದು ತಿಳಿದು ಸಂತೋಷ ಪಡುತ್ತೇನೆ.

ಆತನ ಹೆಸರನ್ನು ಗೌರವಿಸುವುದು ಸಮಗ್ರ ಕನ್ನಡನಾಡಿನ ಕರ್ತವ್ಯ, ತುಳು ನಾಡಿನ ನಮ್ಮ ಹೇಗೂ ಕರ್ತವ್ಯ ಎಂದು ಬೇರೆ ಹೇಳಬೇಕೆಂದಿಲ್ಲ.

ತಾವು ಈ ಸತ್ಕಾರ್ಯವನ್ನು ಕೆಯ್ಕೊಂಡಿರುವ ಬಗ್ಗೆ ತಮ್ಮನ್ನು ಅಭಿನಂದಿಸುತ್ತೇನೆ. ಹಾಗೂ ಆ ಬಗ್ಗೆ ನೆರಸತಕ್ಕ ನಾಡಿದಿನ ಸಭೆಗೆ ಗೆಲವನ್ನೂ ಹಾರೈಸುತ್ತೇನೆ.

ಇತಿ ತಮ್ಮವನೇ

೩೬

**ಮುನಿಸಾಲ ರಾಜು** (ಮಂಗಳೂರು) ೧೮-೩-೧೯೫೩

ಗೋವಿಂದ ಪೈ ಮಾಡುವ ನಮಸ್ಕಾರ. ತಮ್ಮ ನಿನ್ನೆಯ ಪತ್ರವೊಂದರೊಂದಿಗೆ ಪ್ರತ್ಯುತ್ತರದ ಬಗ್ಗೆ ಒಳಪಡಿಸಿದ ಖಾಲಿಪತ್ರವೂ ಇವತ್ತು ಮುಟ್ಟಿದೆ. ಇನ್ನು ಮುಂದೆ ಪ್ರತ್ಯುತ್ತರದ ಬಗ್ಗೆ ಪತ್ರವನ್ನಾಗಲಿ ಟಪ್ಪಾಲು ಚೀಟುಗಳನ್ನಾಗಲಿ ದಯಮಾಡಿ ಕಳುಹಿಸಬಾರದಾಗಿ ವಿನಂತಿ.

ಭಗವಾನ್ ಬುದ್ಧ ಜಯಂತಿಯನ್ನು ತಾವು ಯಾವ ಆಧಾರದ ಮೇಲೆ ಏಪ್ರಿಲ್ ೧೯ನೆಯ ತಾರೀಕಿನಂದು ಆಚರಿಸುವಿರೋ ತಿಳಿಯದು. ಏಕೆಂದರೆ ಬೌದ್ಧ ಗ್ರಂಥಗಳಲ್ಲಿ ಸ್ಪಷ್ಟವಾಗಿ ಹೇಳಿರುವ ಮೇರೆಗೆ ಆತನು ಹುಟ್ಟಿದ ದಿನವೂ ಆತನಿಗೆ ಬೋಧಿ.... (Enlightenment) ಆದ ದಿನವೂ, ಆತನು ಪರಿನಿರ್ವಾಣಹೊಂದಿದ ದಿನವೂ ಅದೊಂದೇ. **ವೈಶಾಖ ಶುದ್ಧ ಹುಣ್ಣಿಮೆ,** ಈ ಸಂವತ್ಸರದಲ್ಲಾದರೆ ವೈಶಾಖ ಮಾಸ ಅಧಿಕವಾಗಿದ್ದು ಎರಡು ವೈಶಾಖ ಮಾಸಗಳು ಬಂದಿರುವುದರಿಂದ

(1) ಮೊದಲಿನ ಆ ವೈಶಾಖ ಶುದ್ಧ ಹುಣ್ಣಿಮೆ ಬರುವ ಎಪ್ರಿಲ್ ೨೯ನೆಯ ತಾರೀಕು ಬುಧವಾರದಂದೂ (2) ಎರಡನೆಯ **ನಿಜ** ವೈಶಾಖ ಹುಣ್ಣಿಮೆ ಒಂದು ತಿಂಗಳ ಮೇಲೆ ಮೇ ೨೮ನೆಯ ತಾರೀಕು ಗುರುವಾರದಂದು ಬಂದಿವೆ ; ಅವೆರಡರಲ್ಲಿ ಯಾವೊಂದು ದಿನವನ್ನು ಮೇಲಾಗಿ ಎರಡನೆಯ ನಿಜ ವೈಶಾಖ ಹುಣ್ಣಿಮೆಯ ದಿನವನ್ನು (೨೮-೫-೧೯೫೩) ಆತನ ಜಯಂತಿಯನ್ನು ಆಚರಿಸುವ ಬಗ್ಗೆ ಆಯ್ದುಕೊಳ್ಳಬೇಕಲ್ಲದೆ, ಅಧಿಕ ವೈಶಾಖ ಷಷ್ಠಿಗೆ ಸರಿಗೂಡುವ ಎಪ್ರಿಲ್ ತಿಂಗಳ ೧೯ನೆಯ ತಾರೀಕನ್ನು ಸರ್ವಥಾ ಅಲ್ಲ. ಅಥವಾ ಅವೆರಡೂ ಹುಣ್ಣಿಮೆಗಳಲ್ಲಿ ಯಾವೊಂದಾದರೂ ಆ ಜಯಂತಿಯು ಸಮಾರಂಭವನ್ನು ಎಲ್ಲರಿಗೂ ಅನುಕೂಲವಾಗಿಸುವಂತೆ ಆದಿತ್ಯವಾರ ಬಾರದಿರುವ ಕಾರಣ ಆ ಹುಣ್ಣಿಮೆಗಳನ್ನು ಆ ಬಗ್ಗೆ ಆಯ್ದುಕೊಳ್ಳುವುದಕ್ಕೆ ಸಾಧ್ಯವಾಗದಿದ್ದರೆ, ಅವನ್ನು ಬಿಟ್ಟು, ಅವುಗಳು ಕಳೆಯುತ್ತಲೆ ಬರುವ ಆದಿತ್ಯವಾರದಂದು ಅಂದರೆ (1) ಮೇ 3ನೆಯ ತಾರೀಕು ಆದಿತ್ಯವಾರದಂದಾಗಲಿ ಅಥವಾ (2) ಮೇ ೩೧ನೆಯ ತಾರೀಖು ಆದಿತ್ಯವಾರದಂದಾಗಲಿ ಆ ಸಮಾರಂಭವನ್ನು ಜರಗಿಸುವುದು ಉತ್ತಮ. ಹೇಗೂ ತಾವು ಆ ಬಗ್ಗೆ ನಿಶ್ಚಯಿಸಿರುವ ಎಪ್ರಿಲ್ ೧೯ನೆಯ ತಾರೀಕು ಎಂದಿಗೂ ಆ ಸಮಾರಂಭಕ್ಕೆ ಉಚಿತವಾದ ದಿನವಲ್ಲ. ನಾನು ಹೇಳತಕ್ಕುದನ್ನು ಕರ್ತವ್ಯದೃಷ್ಟಿಯಿಂದ ತಾನೆ ಹೇಳಿರುತ್ತೇನೆ. ಅದಕ್ಕೆ ತಾವು ಒಪ್ಪಬೇಕೆಂದಿಲ್ಲ. ತಾವು ತಮ್ಮ ಇಷ್ಟದ ಮೇರೆಗೆ ವರ್ತಿಸಬಹುದು.

ಈಗ ತಾವು ಆ ಸಮಾರಂಭವನ್ನು ಜರಗಿಸುವುದು ಯಾವ ಸ್ಥಳದಲ್ಲಿ ? ಎಷ್ಟು ಹೊತ್ತಿಗೆ ಅಂದರೆ ಎಷ್ಟರಿಂದ ಎಷ್ಟು ಗಂಟೆಗಳ ವರೆಗೆ ? ಮತ್ತು ಅಂದಿನ ಕಾರ್ಯಕ್ರಮವೇನು ? ಎಂದು ಮೊದಲಾಗಿ ತಾವು ದಯಮಾಡಿ ನನಗೆ ವಿವರವಾಗಿ ಬರೆದು ಕಳುಹಿಸಿದರೆ, ಆ ಮೇಲೆ ನನ್ನ ಅನುಕೂಲತೆ, ಆರೋಗ್ಯದ ಸ್ಥಿತಿ ಮೊದಲಾಗಿ ಹೇಗೆ ಇವೆ ಎಂದು ಆಲೋಚಿಸಿ ತಮಗೆ ಬರೆದು ಕಳುಹಿಸುವೆ.

ಇತಿ ನಮಸ್ಕಾರ,

**೩೬**

**ಕು. ಶಿ. ಹರಿದಾಸಭಟ್ಟ** (ಉಡುಪಿ) ೬-೧೧-೧೯೫೩

ಗೋವಿಂದ ಪೈ ಮಾಡುವ ನಮಸ್ಕಾರ. ತಮ್ಮ ಮೂರನೆಯ ತಾರೀಕಿನ ಪತ್ರ ಮುಟ್ಟಿತು. ತಾವು ಪ್ರೀತಿಪೂರ್ವಕವಾಗಿ ಇತ್ತಿರುವ ಆಮಂತ್ರಣದ ಬಗ್ಗೆ ತುಂಬಾ ಕೃತಜ್ಞನಾಗಿರುತ್ತೇನೆ.

ಆದರೆ ಮಾಡಲೇನು ? ನನ್ನ ವಯಸ್ಸಿನ ಹಾಗೂ ಅದರ ಆನುಷಂಗಿಕವಾದ ಆಯಾಸಗಳ ಕಾರಣದಿಂದ ಇನ್ನು ಎಲ್ಲಿಗೂ ಹೋಗುವುದೂ ಬೇಡ, ಯಾವ ಕರೆತ

ವನ್ನೂ ಒಪ್ಪಿಕೊಳ್ಳುವುದೂ ಬೇಡ ಎಂದು ನಿಶ್ಚಯಿಸಿರುತ್ತೇನೆ. ಅದರಲ್ಲೂ ಬಹುಜನೀನ (Public) ವಾದ ಸಭೆಗಳಲ್ಲಿ ಭಾಗಿಯಾದರೆ ಕೆಲಕೆಲ ತಾಸುಗಳವರೆಗೆ ಉದ್ದಕ್ಕೆ ಕೂತಲ್ಲೇ ಕೂರಬೇಕಾಗುವ ದಂಡನೆಯನ್ನು ಅನುಭವಿಸಲಿಕ್ಕೆ ಇರುವುದ ರಿಂದ, ಅವುಗಳ ಸಂಬಂಧವನ್ನೇ ದೂರಮಾಡಬೇಕಾಗಿದೆ. ತೀರ ಹೀಗ್ಯಾಗ ಬೇಕಾಗಿದೆ. ಆದ ಕಾರಣ ತಾವೂ ತಮ್ಮ ವಿದ್ಯಾರ್ಥಿ ಬಂಧುಗಳೂ ನನ್ನನ್ನು ದಯಮಾಡಿ ಕ್ಷಮಿಸಬೇಕೆಂದು ಪ್ರಾರ್ಥಿಸುತ್ತೇನೆ. ಮತ್ತು ಇದೊಂದು ಮಾತನ್ನು ಹೇಳುತ್ತೇನೆ. ಕಳೆದ ೧೯೪೫ರಲ್ಲಿ ಉಡುಪಿಯಲ್ಲಿ ಶ್ರೀ ಶ್ರೀ ಮುಂದವೀಡು ಕೃಷ್ಣ ರಾಯರಿಂದ ಮುದ್ದಣನ ಚಿತ್ರವನ್ನು (Water Colour) ಅನಾವರಣ ಮಾಡಿಸಿದ ಸಂದರ್ಭದಲ್ಲಿ ಮುದ್ದಣನನ್ನು ಕುರಿತು ಮಾತನಾಡಬೇಕೆಂದು ನನಗೆ ಆಮಂತ್ರಣ ಬಂದಿದ್ದಾಗ, ಆಗ್ಗೆ ನಾನು ಕೆಲದಿನಗಳ ಅಸೌಖ್ಯದಿಂದ ಮಲಗಿದ್ದು ಅಲ್ಲಿಗೆ ಹೋಗ ಲಾರದೆ ನನ್ನ ಭಾಷಣವನ್ನು ಬರೆದು ಕಳುಹಿಸಿದ್ದೆ. ಅದನ್ನು ನನ್ನ ಮಿತ್ರವರ್ಯ ರಾದ ಶ್ರೀ ಶ್ರೀ ರಾಜಗೋಪಾಲಕೃಷ್ಣರಾಯರು ನನ್ನ ಪರವಾಗಿ ಓದಿದರಂತೆ. ಆ ಕೂಡಲೇ ಬೆಂಗಳೂರಿನ "ಕನ್ನಡ ನುಡಿ"ಯಲ್ಲಿ ಪ್ರಕಟವಾದ ಆ ಭಾಷಣವೂ ಆ ಮೇಲೆ 1949ರಲ್ಲಿ ಮಂಗಳೂರಿನ (Basel Mission Book Depot ನವರ ನೂತನ ಪ್ರೌಢ ಮಾಲಿಕೆಯಲ್ಲಿ (IV ಫೋರ್ಮಿನವರಿಗೆ ಪುಟ 57-67) ಪ್ರಕಟ ವಾಗಿದೆ. ಅದಕ್ಕಿನ್ನು ಒಂದಕ್ಷರವನ್ನಾದರೂ ಕೂಡಿಸಲಿಕ್ಕೆ ನಾನರಿಯೆ. ಹೀಗಾಗಿ ಒಂದು ವೇಳೆ ನನಗೆ ತಮ್ಮಲ್ಲಿಗೆ ಈಗ ಹೋಗಲಿಕ್ಕೆ ಆಗುತಿದ್ದರೂ ನಾನು ಆ ಪುಸ್ತಕ ಹಿಡಿದು ಅದನ್ನೇ ಓದಬೇಕಾಗಿತ್ತು. ಅತಏವ ನೀವು ನನ್ನನ್ನು ತಮ್ಮಲ್ಲಿಗೆ ಬರಮಾಡಿಸಿಕೊಳ್ಳುವುದರಿಂದ ತಮಗೇನೂ ವಿಶೇಷ ಲಾಭವಾಗುವಂತಿಲ್ಲ. ತಾವು ಆಚರಿಸಲಿಕ್ಕೆ ಕೈಗೊಂಡಿರುವ ಮುದ್ದಣ ಜಯಂತಿಯು ಹಾಗೂ ಸಾಹಿತ್ಯೋತ್ಸವದ ಸಮಾರಂಭಗಳು ಶ್ರೀ ದೇವರ ದಯೆಯಿಂದ ತುಂಬಾ ಯಶಸ್ವಿಯಾಗಿ ಜರುಗಲೆಂದು ಹಾರೈಸುತ್ತೇನೆ.

ಇತಿ ನಮಸ್ಕಾರ

೩೮

**ಜಿ. ಎನ್. ಲಕ್ಷ್ಮಣ ಪೈ** (ಪುತ್ತೂರು) ೭-೧೨-೫೩

ಗೋವಿಂದ ಪೈ ಮಾಡುವ ನಮಸ್ಕಾರ.

ತಾವು ಪ್ರೀತಿಪೂರ್ವಕವಾಗಿ ಕಳುಹಿಸಿದ 'ಅಭಿನಯ ಗೀತಮಂಜರಿ' ಎಂಬ ತಮ್ಮ ಕವಿತೆಗಳ ಪುಸ್ತಕ ಕೈಸೇರಿ ಆ ಬಗ್ಗೆ ತಮಗೆ ಕೃತಜ್ಞನಾಗಿರುತ್ತೇನೆ. ಕವಿತೆಗಳೆಲ್ಲಾ ಸೊಗಸಾಗಿವೆ. ಬಾಲಕರ ತರಗತಿಗಳಿಗೆ ಕಲಿಸುವ ಬಗ್ಗೆ ತುಂಬಾ ಉಪಯೋಗಿ ಯಾಗಿವೆ. ಇವು ಕನ್ನಡನಾಡಿನ ಬಾಲಕರ ಶಾಲೆಯಲ್ಲೆಲ್ಲ ಕಲಿಸಲ್ಪಡಲಿಕ್ಕೆ ಬರುವವು ಎಂದು ಕೋರುತ್ತೇನೆ, ಹಾಗೂ ತಮ್ಮನ್ನು ಬಹುಧಾ ಅಭಿನಂದಿಸು ತ್ತೇನೆ.

ಇತಿ ನಮಸ್ಕಾರ

೩೯

**ಆರ್. ಎನ್. ಮೂರ್ತಿ** (ದಾವಣಗೆರೆ) ೬-೨-೧೯೫೪

ಗೋವಿಂದ ಪೈ ಮಾಡುವ ಆಶೀರ್ವಾದ.

ನಿನ್ನ ೪ನೆಯ ತಾರೀಖಿನ ಕಾರ್ಡು ಇವತ್ತು ಮುಟ್ಟಿತು. ನಿನ್ನ ಅಪೇಕ್ಷೆಯ ಮೇರೆಗೆ ನನ್ನದೊಂದು ಭಾವಚಿತ್ರವನ್ನು ಇವತ್ತು ಬುಕ್ ಪೋಸ್ಟ್ ದ್ವಾರಾ Per Express Delivery ಯಾಗಿ ನಿನಗೆ ಕಳುಹಿಸಿರುತ್ತೇನೆ. ನಾನು ಹುಟ್ಟಿದ ದಿನದ ವಿವರ ಹೀಗಿದೆ – ೧೮೮೩ನೆಯ ಇಸವಿ ಮಾರ್ಚಿ ೨೩ನೆಯ ತಾರೀಖು ಶುಕ್ರವಾರ (೨೩-೩-೧೮೮೩). ಆ ದಿನ ನಮ್ಮ ಹಿಂದೂ ಕಾಲ ಗಣನೆಯ ಪ್ರಕಾರ ಚಿತ್ರಭಾನು ಸಂವತ್ಸರ ಫಾಲ್ಗುಣ ಶುದ್ಧ ಹುಣ್ಣಿಮೆಯಾಗುತ್ತದೆ. ಶ್ರೀ ದೇವರು ನಿನಗೂ ನಿನ್ನ ಸಹಪಾಠಿಗಳೆಲ್ಲರಿಗೂ ದೀರ್ಘಾಯುರಾರೋಗ್ಯಾದಿ ಸರ್ವ ಸೌಭಾಗ್ಯವನ್ನಿತ್ತು ನಿಮ್ಮನ್ನು ವಿದ್ಯೆಯಲ್ಲಿ ಮೇಲು ಮೇಲಾಗಿಸಿ, ನಿಮ್ಮಿಂದ ಮಾತೃಭೂಮಿಯ ಸೇವೆಯನ್ನು, ಮಾತೃಭಾಷೆಯ ಸೇವೆಯನ್ನು ತುಂಬಾ ಮಾಡಿಸಿಕೊಳ್ಳಲಿ ಎಂದು ಆತನಲ್ಲಿ ಪ್ರಾರ್ಥಿಸುತ್ತೇನೆ. ತಥಾಸ್ತು. ಇತ್ಯಾಶಿಷಃ

ಟಿಪ್ಪಣಿ: "ಆಶೀರ್ವಾದ" ! ಪೈಗಳ ಇತರ ಯಾವುದೇ ಪತ್ರದಲ್ಲಿ "ನಮಸ್ಕಾರ" ಎಂದೇ ಬರ್ತದೆ. ಇದರಲ್ಲಿಯ ಇನ್ನೊಂದು ಅಚ್ಚರಿಯೆಂದರೆ ಪತ್ರವನ್ನು ಏಕವಚನ ದಲ್ಲಿ ಬರೆದದ್ದು (ಮೂರ್ತಿಯವರು ಸಂಬಂಧಿಕರೇನೂ ಅಲ್ಲ), ಮತ್ತೂ ಒಂದು ಅಚ್ಚರಿ ಯೆಂದರೆ ತಮ್ಮದೊಂದು ಛಾಯಾಚಿತ್ರವನ್ನು ಕಳಿಸಿದ್ದುದು !

೪೦

**ಮುನಿಪಾಲ ರಾಜು** (ಮಂಗಳೂರು) ೧೪-೩-೧೯೫೪

ನಾನು ಹುಟ್ಟಿದ ತಾರೀಖು ೨೩, ಇಸವಿ ೧೮೮೩. ಶ್ರೀ ಬುರ್ಲಿಬಿಂದು ಮಾಧವರ "ಸಾಹಿತ್ಯಜ್ಞರ ಆತ್ಮಕಥನ"ದಲ್ಲಿ ನಾನು ಹೇಳಿರುವುದಕ್ಕಿಂತ ಹೆಚ್ಚಿನ ಮಾಹಿತಿ ಯನ್ನು ತಿಳಿದುಕೊಳ್ಳುವಅಗತ್ಯವಿಲ್ಲ. ಮುದ್ದಣನ ಬಗ್ಗೆ ನೀವು ಪ್ರಕಟಿಸಿದ 'ನೆನಪು' ಎಂಬ ಪುಸ್ತಕವನ್ನು ನಾನು ಈ ವರೆಗೆ ಕಂಡಿಲ್ಲ.

ಇತಿ ನಮಸ್ಕಾರ

೪೧

**ಶಂಕರನಾರಾಯಣ ಭಟ್ಟ** (ಮಿತ್ತೂರು) ೨೮-೪-೫೪

ಗೋವಿಂದ ಪೈ ಮಾಡುವ ನಮಸ್ಕಾರಗಳು-ತಮ್ಮ ಪ್ರತ್ಯುತ್ತರ ಮುಟ್ಟಿತು. ತಮ್ಮ ಕನ್ನಡ ಸಂಧ್ಯಾಭಾಷ್ಯವನ್ನು ಕುರಿತ ನನ್ನ ಅಭಿಪ್ರಾಯವನ್ನು ಇದರೊಂದಿಗೆ

ಮಡಗಿ ಕಳುಹಿಸಿರುತ್ತೇನೆ. ಇದರಲ್ಲಿ 'ಗಿಳಿಪಾಠವಾಗಿ ಸಂತೆ ಹಾಕುತ್ತಿರಬಹುದು' ಎಂಬಲ್ಲಿಯ 'ಸಂತೆ ಹಾಕುವುದು' ಎಂಬುದು ಪ್ರಾಯಶಃ ಅಪೂರ್ವವಾಗಿ ತೋರ ಬಹುದೇನೋ. ಆ ಕಾರಣ ಅದರ ಅರ್ಥವನ್ನು ಇಲ್ಲಿ ಕೊಡುತ್ತೇನೆ. ವಟುಗಳಿಗೆ ವೇದಾಭ್ಯಾಸ ಮಾಡಿಸುವಲ್ಲಿ ಅವರಿಗೆ ಸಂಸ್ಕೃತ ಭಾಷೆಯ ಹಾಗೂ ವ್ಯಾಕರಣದ ಜ್ಞಾನ ಇನ್ನೂ ಆಗಿರುವುದಿಲ್ಲ. ಆಗ್ಗೆ ಅವರಿಂದ ವೇದದ ಋಕ್ಕುಗಳನ್ನು ಬಾಯಿ ಪಾಠ ಮಾಡಿಸಿ ವೇದವನ್ನು ಕಂಠಪಾಠ ಮಾಡಿಸುವರಷ್ಟೇ. ಆಗ್ಗೆ ಹಲವು ದಿನ ಗಳಿಗೆ ಪ್ರತಿದಿನ ವೇದದ ಒಂದೊಂದು ಪಂಕ್ತಿಯನ್ನು ೧೦-೨೦ ಬಾರಿ ಅವರಿಂದ ಮರುಕಳಿಸುತ್ತಾರಷ್ಟೇ, ಅದಕ್ಕೆ ಸಂತೆ ಹಾಕುವುದು ಎನ್ನುತ್ತಾರೆ. ಆ ಕಾರಣ ಸಂತೆ ಹಾಕುವುದು ಎಂದರೆ ಅರ್ಥಜ್ಞಾನವಿಲ್ಲದೆ ಬಾಯಿಪಾಠ ಮಾಡಿಕೊಂಡದ್ದನ್ನು ಹೇಳುತ್ತಹೋಗುವುದು ಎಂದು ಅರ್ಥ.

ತಮಗೆ ತಂತಮ್ಮ ಅಭಿಪ್ರಾಯವನ್ನು ಕಳುಹಿಸಿರುವ ಶ್ರೀರಂಗನಾಥ ದಿವಾಕರರೂ ಪ್ರೊಫೆಸರ್ ಶ್ರೀ ನಾಗರಾಜ ಶರ್ಮರವರೂ ಸಂಸ್ಕೃತದಲ್ಲಿಯೂ ವೇದಾರ್ಥವಿದ್ಯೆ ಯಲ್ಲಿಯೂ ನಿಷ್ಣಾತರು, ಸರಸ್ವತೀದೇವಿಯ ವರಪುತ್ರರು. ಅವರ ಅಭಿಪ್ರಾಯ ಗಳ ಮುಂದೆ ನನ್ನ ಅಭಿಪ್ರಾಯವೆಂದರೆ ಸೂರ್ಯನ ಮುಂದೆ ದೀಪದ ಬತ್ತಿಯಂತೆ. ಆದರೂ ನನ್ನ ಅಭಿಪ್ರಾಯವನ್ನೂ ತಾವು ಬೇಕೆಂದು ತಿಳುಹಿಸಿದ್ದಿರಿ. ತಮಗೆ ಈಗ ಕಳುಹಿಸಿ ಕೊಟ್ಟೆ.

ಅವಶ್ಯವಾಗಿ ಇತ್ತ ಕಡೆಗೊಮ್ಮೆ ಬರುವ ಉಪಕಾರವನ್ನು ಮಾಡಿರಿ. ಆ ಬಗ್ಗೆ ತಮಗೆ ಕೃತಜ್ಞನಾಗಿರುವೆನು, ಹಾಗೂ ಆ ಬಗ್ಗೆ ಮುಂದಾಗಿ ನನ್ನ ಧನ್ಯವಾದ ಗಳನ್ನೂ ತೆತ್ತಿರುವೆನು.

ಇತಿ ನಮಸ್ಕಾರಗಳು

೪೨

**ಮುನಿಪಾಲ ರಾಜು** (ಮಂಗಳೂರು) ೨೧-೫-೫೪

ನೀವು ಪ್ರೀತಿಪೂರ್ವಕ ಕಳುಹಿಸಿರುವ 'ಭಗವಾನ್ ಬುದ್ಧ' ಎಂಬ ಪುಸ್ತಕದ ಎರಡು ಪ್ರತಿಗಳು ನನಗೆ ಮುಟ್ಟಿವೆ. ಆ ಬಗ್ಗೆ ತುಂಬಾ ಧನ್ಯವಾದಗಳು. ಅಚ್ಚಿನ ಕೊರತೆ ಗಳು ಅಲ್ಲಲ್ಲಿವೆ. ಉದಾ : ನಾನು ಭಾಷಣ ಮಾಡಿದ್ದು 1954ರಲ್ಲಿ (ಮೊನ್ನೆ) ಅಲ್ಲ, ಕಳೆದ ವರ್ಷ ೧೯೫೩ರಲ್ಲಿ. (ನಮ್ಮ ಮಾತು) "ನಮೋ ಸತ್ಯ" ಅಲ್ಲ, "ಆರಹತೋ" ಅಲ್ಲ, "ಸಂಬದ್ಧಸ್ಯ" ಅಲ್ಲ–"ನಮೋ ತಸ್ಯ" "ಅರಹತೋ" ಮತ್ತು "ಸಂಬುದ್ಧಸ್ಯ" (ಪು. ೨೧) ಇತ್ಯಾದಿ. ಒಂದೇ ಒಂದು ದಿನದ ಅವಕಾಶ ಮಾಡಿ ಕೊನೆಯ ಪ್ರೂಫನ್ನು ನನ್ನ ತಿದ್ದುಗೆಯ ಬಗ್ಗೆ ಇಲ್ಲಿ ಕಳುಹಿಸುತ್ತಿದ್ದರೆ, ಪುಸ್ತಕ ಹೀಗೆ ಅರೂಪವಾಗುತ್ತಿರಲಿಲ್ಲ. ಆದರೆ ಆಗಿ ಹೋದುದಕ್ಕೆ ಬೇಸರಿಸಿ ಫಲವಿಲ್ಲ.

ಇತಿ ನಮಸ್ಕಾರ

ಟಿಪ್ಪಣಿ : ಪೈ ಅವರು ಮುನಿಪಾಲರಾಜು ಅವರ 'ಭಗವಾನ್ ಬುದ್ಧ' ಕೃತಿಗೆ ಮುನ್ನುಡಿ ಬರೆದಿದ್ದಾರೆ.

ಆರ್. ಎನ್. ಮೂರ್ತಿ (ದಾವಣಗೆರೆ) ೧೦-೭-೧೯೫೪

ಗೋವಿಂದ ಪೈ ಮಾಡುವ ನಮಸ್ಕಾರಗಳು. ತಮ್ಮ ೩ನೆಯ ತಾರೀಕಿನ ಪತ್ರ ಇವತ್ತು ಮುಟ್ಟಿತು.

[೧] ವೈ. ವಾ. ಶ್ರೀ ಶ್ರೀ ಬಿ. ವೆಂಕಟಾಚಾರ್ಯರು ರಚಿಸಿದ ಕೃತಿಗಳು ಒಟ್ಟಾರೆ ಎಷ್ಟು ಎಂದು ಈಗ ನೆನಪಿಗೆ ಬಾರದಿದ್ದರೂ, ಹಾಗೂ ಅವುಗಳ ೨-೨ ಪ್ರತಿಗಳು ಒಮ್ಮೊಮ್ಮೆ ನನ್ನೊಂದಿಗೆ ಇದ್ದವಾದರೂ ಅವನ್ನು ಎರಕೊಂಡವರು ಮರಳಿ ತಂದುಕೊಡದೆ ಅವು ಕಳೆದು ಹೋದದ್ದರಿಂದ ಈಗ ಅವೆಲ್ಲವುಗಳ ಮೊತ್ತ ಸಂಖ್ಯೆಯನ್ನಾಗಲಿ, ಹೆಸರುಗಳನ್ನಾಗಲಿ ತಿಳಿಸುವರೆ ಸಾಧ್ಯವಿದ್ದಿಲ್ಲ. ಆದರೆ ಮಂಗಳೂರಿನ ಗೌರ್ನಮೆಂಟ್ ಕಾಲೇಜಿನ ಲೈಬ್ರರಿಯ ಕೆಟಲಾಗು ನನ್ನೊಂದಿಗೆ ಬಂದು ಇದ್ದುದರಿಂದ ಅದರಲ್ಲಿ ನೋಡಿ ಸಂಗ್ರಹಿಸಿದ ವಿವರವನ್ನು ಇಲ್ಲಿ ಬರೆದಿರುತ್ತೇನೆ. (೧) ಅಡವಿಯ ಹುಡುಗಿ (೨) ಚಂದ್ರಶೇಖರ (೩) ದೇವೀ ಚೌಧುರಾಣಿ (೪) ದುರ್ಗೇಶನಂದಿನೀ (೫) ಇಂದಿರಾ (೬) ಕಮಲಾಕಾಂತ (೭) ಕಪಾಲಕುಂಡಲಾ (೮) ಕೊಹಿನೂರು (೯) ಕೃಷ್ಣಕಾಂತನ ವೀಲು (೧೦) ಲೋಕರಹಸ್ಯ (೧೧) ಮಾಧವೀಲತಾ (೧೨) ಮಾಯಾವಿ (೧೩) ಮನೋರಮೆ (೧೪) ರಮಾಬಾಯಿ (೧೫) ರಾಧಾರಾಣಿ (೧೬) ರಾಮೇಶ್ವರನ ಅದೃಷ್ಟ (೧೭) ವಂಗವಿಜೇತ (೧೮) ನವಾಬನಂದಿನಿ (೧೯) ಶಾಂತಿ (೨೦) ಸೀತಾರಾಮ (೨೧) ರಜನಿ (೨೨) ರಾಜಸಿಂಹ (೨೩) ವಿಷವೃಕ್ಷ (೨೪) ಯುಗಳಾಂಗುರೀಯ (೨೫) ಪರಿಮಳಾ (೨೬) ಅಮೃತಪುಲಿನ (೨೭) ಅಹಲ್ಯಾಬಾಯಿ (೨೮) ಭಾರತಮಹಿಳಾ (೨೯) ಭ್ರಾಂತಿ ವಿಲಾಸ (೩೦) ದೇಶಾಂತರಗಳಲ್ಲಿ (೩೧) ಕಾಗೆ (೩೨) ಕಮಲಾನಾಥ (೩೩) ಕರ್ಮಕ್ಕೆ ತಕ್ಕ ಫಲ (೩೪) ಕ್ಷತ್ರಿಯ ರಮಣಿ (೩೫) ಮಶಕ (೩೬) ಸೀತಾವನವಾಸ (೩೭) ಶಕುಂತಲಾ (೩೮) ಅತ್ತಿಗೆ (೩೯) ಪ್ರಾಚೀನ-ನವೀನ ಸ್ತ್ರೀ ಪುರುಷರು (೪೦) ಸಾಧನೆ (?) (೪೧) ಉನ್ಮಾದಿನಿ, ಇತ್ಯಾದಿ.

ಇವುಗಳಲ್ಲಿ (?) ಎಂದು ಗುರುತಿಸುವ ಕೃತಿಗಳನ್ನು ಕಂಡ, ಓದಿದ ನೆನಪು ನನಗಿಲ್ಲ.
[೨] ಶ್ರೀ ವೈಷ್ಣವಧರ್ಮಸ್ಥಾಪಕರಾದ ಶ್ರೀ ರಾಮಾನುಜಾಚಾರ್ಯರೂ ಅವರ ಶಿಷ್ಯ ಪರಂಪರೆಯೂ ತಮಿಳರು. ಆ ಕಾರಣ ಆ ಧರ್ಮ ತಮಿಳರಲ್ಲೇ ಹೆಚ್ಚು ಹಬ್ಬಿತು.

ರಾಮಾನುಜಾಚಾರ್ಯರು ತಮಿಳುನಾಡಿನಿಂದ ಕನ್ನಡನಾಡಿನ ಮೇಲುಕೋಟೆಗೆ ಬಂದು ನೆಲಸಿದಂದಿನಿಂದ ಶ್ರೀ ವೈಷ್ಣವಧರ್ಮ ಕನ್ನಡನಾಡಿಗೆ ಬಂದಿತಾದರೂ ಕ್ರಿಸ್ತಶಕದ ೧೨ನೆಯ ಶತಮಾನದಲ್ಲಿ ಅವರೊಂದಿಗೂ ಹಾಗೂ ಅವರ ಹಿಂದೆ ....X.... ಕನ್ನಡ ನಾಡಿನಲ್ಲಿ ಬಂದು ನೆಲಸಿದ ತಮಿಳರು ಸಾಹಜಿಕವಾಗಿ ತಮ್ಮ

ಭಾಷೆಯನ್ನೆ ಆಡತೊಡಗಿದರು. ಈಗಲೂ ಕನ್ನಡ-ತೆಲುಗು ಮಿಶ್ರವಾದ ಆ ಭಾಷೆಯನ್ನೇ ಆಡುತ್ತಾರೆ. ಆದರೆ ಅವರಲ್ಲಿ ತೆಲುಗನ್ನು ಮನೆಮಾತಾಗಿ ಆಡುವವರೂ ಇದ್ದಾರೆ. ಉದಾ. ಶ್ರೀ ಸೀತಾರಾಮಯ್ಯ, ತಾತಾಚಾರ್ಯ ಶರ್ಮ ಹಾಗೂ ಅವರಂತೆಯೇ ತೆಲುಗುನಾಡಿನಿಂದ ಕನ್ನಡನಾಡಿಗೆ ಬಂದು ನೆಲಸಿದ ಶ್ರೀ ವೈಷ್ಣವರು ಮನೆಯಲ್ಲಿ ತೆಲುಗು ಆಡುತ್ತಾರೆ. ಹಾಗೂ ಆಂಧ್ರದಲ್ಲಿ ನೆಲಸಿದವರೂ ಅಲ್ಲಿ ತೆಲುಗನ್ನು ಆಡುತ್ತಾರೆ.

[೩] ತಮಿಳು ಭಾಷೆ ಕನ್ನಡಕ್ಕಿಂತ ತಕ್ಕಷ್ಟಾದರೂ ಪ್ರಾಚೀನವೆನ್ನಬೇಕು. ಅದರಲ್ಲಿಯೂ 'ಕವಿಲ್' ಎಂಬ ಕೃತಿ ಕ್ರಿಸ್ತಪೂರ್ವ ೨-೧ ಶತಮಾನದ್ದಂತೆ. ಅಷ್ಟು ಹಿಂದಿನ ಕೃತಿ ಕನ್ನಡದಲ್ಲಿ ದೊರೆತಿಲ್ಲ.

[೪] ಮನೆಮಾತು ಕನ್ನಡ ಅಲ್ಲದವರು ಕನ್ನಡದಲ್ಲಿ ಸೇವೆ ಸಲ್ಲಿಸುವವರು ಕೆಲಕೆಲ ಮಂದಿ ಇದ್ದಾರಷ್ಟೆ - ಅವರನ್ನೂ ಕನ್ನಡಿಗರು, ಕನ್ನಡಿಗರೆನ್ನಬಹುದು - ಹಾಗೆ ಹೇಳಲೇಬೇಕೆಂದಿಲ್ಲ. ಉದಾ. Joseph Conrad ಎಂಬೊಬ್ಬ Polandನ ವ್ಯಕ್ತಿ ಇಂಗ್ಲೀಷಿನಲ್ಲಿ ಉತ್ತಮ ಗ್ರಂಥಗಳನ್ನು ಬರೆದು ಆಂಗ್ಲಸಾಹಿತ್ಯದಲ್ಲಿ ಕೂಡಿಸಲ್ಪಡುವವನಾಗಿದ್ದಾನೆ. ಆತನನ್ನು ಆಂಗ್ಲರು ಆಂಗ್ಲನೆನ್ನುವುದಿಲ್ಲ. ಆತನೂ ತಾನು ಆಂಗ್ಲನೆನ್ನುತ್ತಿರಲಿಲ್ಲ.

ಇತಿ ನಮಸ್ಕಾರ

ಟಿಪ್ಪಣಿ: ಕರ್ನಾಟಕಸ್ಥ ಶ್ರೀ ವೈಷ್ಣವರು ಮನೆಯಲ್ಲಿ ತಮಿಳು ಮಾತನಾಡುವವರಾಗಿ, ಎಷ್ಟರ ಮಟ್ಟಿಗೆ ಕನ್ನಡಿಗರೆನಿಸಿಕೊಳ್ಳುತ್ತಾರೆ? - ಎಂಬುದು ಮೂರ್ತಿಯವರ ಮನದಲ್ಲಿದ್ದ ಒಂದು ತಾತ್ವಿಕ ಸಂದೇಹ. ಈ ಪತ್ರದ ಹಿನ್ನೆಲೆಯ ಬಗ್ಗೆ ನಾನು ಮೂರ್ತಿಯವರನ್ನು ವಿಚಾರಿಸಿದಾಗ ಅವರು ಈ ರೀತಿ ಬರೆದು ತಿಳಿಸಿದ್ದಾರೆ (ದಿ. ೨೬-೫-೧೯೮೭ರ ಪತ್ರದಲ್ಲಿ):

"ಆಗ ಕರ್ನಾಟಕ ಏಕೀಕರಣಕ್ಕಾಗಿ ಹೋರಾಟ ನಡೆಯುತ್ತಿದ್ದು, ಹಳೆಯ ಮೈಸೂರಿನವನಾದ ನಾನು ಸಂದಿಗ್ಧದ ಮನಸ್ಥಿತಿಯಲ್ಲಿದ್ದೆ. ಮೈಸೂರಿನ ಹಲವಾರು ಉದ್ದಾಮ ಕನ್ನಡ ಸಾಹಿತಿಗಳು ಮನೆಯಲ್ಲಿ ಮಾತನಾಡುತ್ತಿದ್ದ ಭಾಷೆ ತಮಿಳು. (ಇದೇ ರೀತಿ ತೆಲುಗು, ಮರಾಠಿ ಮತ್ತು ಇತರ ಭಾಷೆಗಳನ್ನೂ ಆಡುವವರಿದ್ದಾರೆ.) ಬೆಂಗಳೂರಿನಲ್ಲಿ ಈ ರೀತಿಯ ಪರಿಸ್ಥಿತಿ ಎಲ್ಲಿಗೆ ಹೋಗಿತ್ತೆಂದರೆ ಬೆಂಗಳೂರನ್ನೇ ತಮಿಳುನಾಡಿಗೆ ಸೇರಿಸಬೇಕೆಂದೂ ಸಹ ಬೇಡಿಕೆ, ತಮಿಳರಿಂದ ಬಂದಿತ್ತು! ಆಗ ನಾವು ಬೆಂಗಳೂರು ನಗರದಲ್ಲಿ ನಡೆಸಿದ ಸ್ಯಾಂಪಲ್ ಸಮೀಕ್ಷೆಯಿಂದ ತಿಳಿದು ಬಂದದ್ದೆಂದರೆ, ಇಂತಹ ಲಕ್ಷಾಂತರ ಜನರು ಮನೆಯಲ್ಲಿ ಕನ್ನಡವನ್ನು ಬಿಟ್ಟು ಬೇರೆ ಭಾಷೆಯನ್ನು ಮಾತನಾಡಿದರೂ, ತಮ್ಮ ಆ ಭಾಷೆಯಲ್ಲಿ ಓದಲು, ಬರೆಯಲು ಬರುತ್ತಿರಲಿಲ್ಲ. ಅವರ ಎಲ್ಲಾ ಪತ್ರವ್ಯವಹಾರವು ಕೇವಲ ಕನ್ನಡದ ಮೂಲಕವೇ ನಡೆಯುತ್ತಿತ್ತು. ಹೀಗೆ ಅವರೂ ಸಹ ಅಚ್ಚಕನ್ನಡಿಗರೆಂಬುದು ಸ್ಥಾಪಿತವಾಗಿತ್ತು. ಈ ಬಗ್ಗೆ ನಾವುಗಳು ಆಗಿನ ಮುಖ್ಯ ಮಂತ್ರಿಗಳಾದ ಹನುಮಂತಯ್ಯನವರಿಗೆ, ಮತ್ತಿತರರಿಗೆ ಮನವಿ ಸಲ್ಲಿಸಬೇಕೆಂಬ ಉದ್ದೇಶದಿಂದ,

ಪೈಗಳಿಗೆ ಕಾಗದ ಬರೆದು ಶ್ರೀ ವೈಷ್ಣವರು ಮನೆಯಲ್ಲಿ ತಮಿಳನ್ನೆ ಆಡಲು ಐತಿಹಾಸಿಕ ಕಾರಣವೇನು ಎಂಬುದಾಗಿ ಕೇಳಿದ್ದೆ."

೪೪

**ಅಮ್ಮೆಂಬಳ ಶಂಕರನಾರಾಯಣ ನಾವಡ** (ಕೋಟೆಕಾರು) ೧೯-೮-೫೪

ಗೋವಿಂದ ಪೈ ಮಾಡುವ ನಮಸ್ಕಾರ.

ನನ್ನ (೧) 'ಕನ್ನಡ ಭಾರತದ ಅರ್ಜುನ' ಎಂಬ ಲೇಖವು ೧೯೪೯ನೆಯ ಇಸವಿಯ ಹುಬ್ಬಳ್ಳಿಯ 'ಕರ್ಮವೀರ' ಪತ್ರಿಕೆಯ ದೀಪಾವಳಿಯ ವಿಶೇಷ ಸಂಚಿಕೆಯಲ್ಲೂ (ಪುಟ ೫೫-೫೮) ಮತ್ತು (೨) 'ಕನ್ನಡ ಭಾರತದ ಕರ್ಣ' ಎಂಬ ಲೇಖವು ೧೯೪೯ನೆಯ ಇಸವಿಯ ಧಾರವಾಡದ 'ಜಯಂತಿ' ಪತ್ರಿಕೆಯ ದೀಪಾವಳಿಯ ವಿಶೇಷ ಸಂಚಿಕೆಯಲ್ಲೂ (ಪು. ೨೩೭-೨೪೧) ಪ್ರಕಟವಾಗಿವೆ. ಪ್ರತಿ ವಿಶೇಷ ಸಂಚಿಕೆಯ ಕ್ರಯ ರೂಪಾಯಿ ೧ (ಒಂದು). ಇವುಗಳ ಪ್ರತಿಗಳು ಈಗ ಬೆಲೆಗೆ ದೊರಕ ಬಹುದು. ನನಗೆ ಒಂದೊಂದೇ ಪ್ರತಿ ಬಂದಿದೆಯಲ್ಲದೆ ನನ್ನ ಲೇಖಗಳ ಹೆಚ್ಚಿಗೆ reprints ಕೂಡ ಬಂದಿಲ್ಲ. ನನ್ನೊಂದಿಗೆ ಇರುವ ಒಂದೊಂದೇ ಪ್ರತಿಯನ್ನು ಎರವಲಾಗಿ ಕೊಡಲಾಗುವುದಿಲ್ಲ. ಆಯಾ ಕಡೆಗಳಲ್ಲಿ ಪ್ರತಿಗಳು ದೊರೆಯುವಾದರೆ ಇಲ್ಲಿ ಬಂದು ನನ್ನ ಲೇಖಗಳನ್ನು ಸಂಪ್ರತಿಸಿ ಕೊಂಡುಹೋಗಬಹುದು. ಅವನ್ನು ಪ್ರಕಟಿಸಲೂ 'ಗೊಲ್ಗೊಥಾ' ಮತ್ತು 'ಹೆಬ್ಬೆರಳು'ಗಳಿಂದ ಬೇಕಾದ ಅಂಶಗಳನ್ನು ಎತ್ತಿಕೊಂಡು ಪ್ರಕಟಿಸಲೂ ನನ್ನ ಸಂಪೂರ್ಣ ಅನುಮತಿಯಿದೆ.

ಇತಿ ನಮಸ್ಕಾರ

ಟಿಪ್ಪಣಿ : ಶ್ರೀನಾವಡ ಹಾಗೂ ಶ್ರೀ ಎನ್. ನಾರಾಯಣಭಟ್ಟರಿಂದ ಸಂಪಾದಿತ 'ಅಭಿನವ ಸಾಹಿತ್ಯ ಮಾಲೆ'ಯೆಂಬ ಹೈಸ್ಕೂಲು ಪಠ್ಯ ಪುಸ್ತಕದಲ್ಲಿ ಲೇಖಗಳನ್ನೂ ಕವನಗಳನ್ನೂ ಪ್ರಕಟಸಲು ಒಪ್ಪಿಗೆ ಪತ್ರ.

೪೫

**ಶಂಕರನಾರಾಯಣ ಭಟ್ಟ**, ಮಿತ್ತೂರು. ೧-೯-೧೯೫೪

ಗೋವಿಂದ ಪೈ ಮಾಡುವ ನಮಸ್ಕಾರ. ತಾವು ಅತ್ಯಂತ ಪ್ರೀತಿ ಪೂರ್ವಕವಾಗಿ ಕಳುಹಿಸಿರುವ ತಮ್ಮ ಅಮೂಲ್ಯ ಗ್ರಂಥ 'ಸಂಧ್ಯಾ ಭಾಷ್ಯ'ದ ಪ್ರತಿ ಇವತ್ತು ಇಲ್ಲಿ ಕೈಸೇರಿ ತಮಗೆ ಆ ಬಗ್ಗೆ ತುಂಬಾ ಋಣಿಯಾಗಿರುತ್ತೇನೆ. ಧನ್ಯವಾದಗಳು. ಈ ಪುಸ್ತಕ ಕನ್ನಡ ನಾಡಿನಲ್ಲೆಲ್ಲ ಸ್ವಾಗತಿಸಲ್ಪಡಲಿ, ಆದರಿಸಲ್ಪಡಲಿ ಎಂದು ಹಾರೈಸುತ್ತೇನೆ.

ಇತಿ ನಮಸ್ಕಾರ

ಸಮೇತನಹಳ್ಳಿ ರಾಮರಾಯ (ರಾಮನಗರ) ೪-೨-೫೫

ಗೋವಿಂದ ಪೈ ಮಾಡುವ ನಮಸ್ಕಾರ. ತಮ್ಮ ಕಳೆದ ಜನವರಿ 16ನೆಯ ತಾರೀಖಿನ ಪತ್ರವೂ ಅದರೊಂದಿಗೆ ಮಡಗಿ ಕಳುಹಿಸಿದ "ಕಲ್ಪನೆ"ಯೂ ಇಲ್ಲಿಗೆ ಮುಟ್ಟಿ 15 ದಿನಗಳಿಗೆ ಮಿಕ್ಕಿದರೂ, ಈ ವರೆಗೆ ಪ್ರತ್ಯುತ್ತರ ಬರೆಯಲಾಗಲಿಲ್ಲ. ನನಗೆ 2-3 ತಿಂಗಳ ಹಿಂದೆ ಕಠಿಣವಾದ ಕಾಯಿಲೆಯಾಗಿ ಅದರಿಂದ ಕಳಕೊಂಡ ತ್ರಾಣವು ಇನ್ನೂ ತೀರಿಲ್ಲದೆ ಯಾವ ಕೆಲಸಕ್ಕೂ ಮನಸ್ಸು ಬಾರದ ಅವಸ್ಥೆ ಒಂದುಕಡೆ, ನಾನು ಕೈಕೊಂಡು ಈ ವರೆಗೆ ಮಾಡಿ ಮುಗಿಸಿಲ್ಲದ ಕೆಲಸಗಳ ಕಡೆಗೆ ತಾನೇ ಹೊರತು ಬೇರೆ ಯಾವ ಕಡೆಗೂ ಈಗ ಮನಸ್ಸು ಹೋಗಲೊಲ್ಲದ ಅವಸ್ಥೆ ಮತ್ತೊಂದು ಕಡೆ. ಹೀಗೆ ಮನಸ್ಸು ಕವಲೊಡೆದಿರುವ ಕಾರಣ ಆ ಅವಧಿಗಳಲ್ಲಿ ಈ ಬಗೆಯ ವಿಳಂಬ ಉಂಟಾಗ ಬೇಕಾಯಿತು. ದಯಮಾಡಿ ಕ್ಷಮಿಸುವುದು. ನಾನು ಮಾಡಿರುವ, ಇನ್ನೂ ಅಲ್ಲಿಷ್ಟು ಇಲ್ಲಿಷ್ಟು ಮಾಡುತ್ತಿರುವ ಇತಿಹಾಸ ಸಂಶೋಧನದಲ್ಲಿ ಹೆಚ್ಚಾಗಿ ಕಾಲನಿರ್ಣಯದ ಸಮಸ್ಯೆಗಳನ್ನು ಎತ್ತಿಕೊಂಡು, ಅವನ್ನು ಬಗೆಹರಿಸಲಿಕ್ಕೆ ತಾನೆ ಯತ್ನಿಸಿರುವೆನಲ್ಲದೆ ಐತಿಹಾಸಿಕ ಕಥಾಭಾಗದ ಕಡೆಗೆ ಮನಸ್ಸು ಹಾಯಿಸಲಿಲ್ಲ. ಅದಾಗಿ ತಾವು ನನ್ನಿಂದ ನಿರೀಕ್ಷಿಸುವ ಸೇವೆಯನ್ನು ಸಲ್ಲಿಸುವರೆ ನಾನು ಸರ್ವಥಾ ಯೋಗ್ಯನಲ್ಲ. ಇದು ಮನಃಪೂರ್ವಕವಾಗಿ ಹೇಳುವ ಮಾತು. ತಾವಿದನ್ನು ಕಂಡಿತವಾಗಿ ನಂಬಬಹುದು. ಆದರೂ ತಮ್ಮ 'ಕಲ್ಪನೆ'ಯನ್ನು ಓದಿನೋಡಿದೆ. ನನಗಾದರೊ ಅದರಲ್ಲಿ ಯಾವ ಬಗೆಯ ಕಾಲಾತಿಪತ್ತಿಯ ದೋಷವಾದರೂ ಇರುವಂತೆ (anachronism) ತೋರುವುದಿಲ್ಲ. ಇದು ಸತ್ಯ. ತಮ್ಮನ್ನು ಅಭಿನಂದಿಸುತ್ತೇನೆ. ತಮಗಿನ್ನೂ ಆತ್ಮವಿಶ್ವಾಸ ಸಾಲದಾದರೆ, ಮೈಸೂರಿನಲ್ಲಿ ಡಾ॥ ಎಸ್. ಶ್ರೀಕಂಠಶಾಸ್ತ್ರಿಗಳಿದ್ದಾರೆ. (M.A., D.Litt) ಅವರನ್ನು ವಿಚಾರಿಸಿ ಅವರು ತೋರಿಸುವ ದಾರಿಯಲ್ಲಿ ಮುನ್ನಡೆಯಿರಿ. ಆ ಮೇಲೆ ಕಾಲಾತಿಪತ್ತಿಯ ಯಾವ ಭೀತಿಯೂ ಇದ್ದಿರಲಾರದು.

ಜತೆಗೆ ಈ ಕೆಲವು ಪುಸ್ತಕಗಳನ್ನೂ ಓದಿರಿ.

(1) Epigraphia Carnatica.
Vol : II. ಶ್ರವಣಬೆಳ್ಗೊಳದ ಶಾಸನಗಳು

(2) Epigraphia Carnatica.
Vol V: ಹಾಸನ ಜಿಲ್ಲೆಯ ಶಾಸನಗಳು

(3) Fleet's Kanarese Dynasties
(Hoysala Dynasty)

(4) Sri R. S. Panchamukhi
ಕನ್ನಡ ರಾಜಮನೆತನಗಳು

ಇವು ಅಲ್ಲಿಯ ಹೊಯ್ಸಳರ, ಮುಖ್ಯವಾಗಿ ವಿಷ್ಣುವರ್ಧನನ ಶಾಸನಗಳು.

ಇನ್ನು ಐತಿಹಾಸಿಕ ಕಥೆಗಳನ್ನು ಎತ್ತಿಕೊಂಡು ಕಾದಂಬರಿಗಳನ್ನು ರಚಿಸಿದ ಯುರೋಪಿನ ಮಹಾ ಕಾದಂಬರಿಕಾರರು ಕೂಡಾ ಅಲ್ಲಲ್ಲಿ ಎಡಹದೆ ಇಲ್ಲ. ಆದ ಕಾರಣ ಆ ದೋಷಕ್ಕೆ ಈಡಾದೆನೆಂದು ಅಂಜಿ ಕೈಕಟ್ಟಿಕೊಂಡು ಸುಮ್ಮನಿರಬೇಡಿ. ಶ್ರೀ ದೇವರಲ್ಲಿ ಸಂಪೂರ್ಣ ಭಾರವಿಕ್ಕಿ ಬರೆಯಲಿಕ್ಕೆ ತೊಡಗಿರಿ. ತಮ್ಮ ಕಾದಂಬರಿಯನ್ನು ಸುಸೂತ್ರವಾಗಿ ಕೊನೆಗಾಣಿಸುವುದೂ, ಅದನ್ನು ಯಶಸ್ವಿಯಾಗಿಸುವುದೂ ತಮ್ಮದಲ್ಲ. ಆತನ ಹೊಣೆಯೆಂದೇ ಬಗೆಯಿರಿ. ಆತನು ಹಾಗೆಯೇ ತಮ್ಮ ಅಭೀಷ್ಟವನ್ನು ನೆರವೇರಿಸುವನು. ಇದೇ ಆತನ ಹೆಸರಿನಲ್ಲಿ ತಮ್ಮ ಬೆನ್ನಿನ ಮೇಲೆ ನನ್ನ ತಟ್ಟು. ಸಾಕು. ಇತಿಶಮ್.

ಇತಿ ನಮಸ್ಕಾರ

P. S. ತಮ್ಮ 'ಕಲ್ಪನೆ'ಯನ್ನು (Book Post) ದ್ವಾರಾ (Express Delivery) ತಮಗೆ ಇಂದಿನ ಟಪ್ಪಾಲಿನಲ್ಲೇ ಮರಳಿ ಕಳುಹಿಸಿರುತ್ತೇನೆ.

೪೭

**ಎನ್. ಎ. ಶೀನಪ್ಪ ಹೆಗ್ಗಡೆ** (ಮಂಗಳೂರು) ೩-೩-೧೯ [?]

ತಮ್ಮ 28ನೆಯ ತಾರೀಕಿನ ಪತ್ರವೂ ಅದರೊಂದಿಗೆ ಮಡಗಿ ಕಳುಹಿಸಿದ ಅವೆರೆಡು ಶಾಸನಗಳ ನಕಲುಗಳೂ ನಿನ್ನೆ ಕೈ ಸೇರಿದವು. ನನಗೀಗ ಕೈಯ್ತುಂಬ ಕೆಲಸವಿರುವುದರಿಂದಲೂ, ಆ ಶಾಸನಗಳಲ್ಲಿಯ ಅಕ್ಷರಗಳನ್ನು ನನ್ನೊಂದಿಗಿರುವ ಪ್ರಾಚೀನ ಲಿಪಿಯ ಗ್ರಂಥದಲ್ಲಿ ಒಂದೊಂದಾಗಿ ಹುಡುಕಾಡಿ ಗೊತ್ತು ಹಚ್ಚಬೇಕಾಗುವುದರಿಂದಲೂ ಆ ಬಗ್ಗೆ ತಕ್ಕ ಸಮಯವಿಲ್ಲದೆ, ಆ ನಕಲುಗಳನ್ನು ಧಾರವಾಡಕ್ಕೆ ಕಳಿಸಿರುತ್ತೇನೆ. ಅವರು ಅದನ್ನು ಓದಿ ತಿಳಿಸುತ್ತಲೇ ನಿಮಗೆ ತಿಳಿಯಪಡಿಸುವೆನು. ಆಗ್ಗೆ ತಾವು ತಮ್ಮ ಪತ್ರದೊಂದಿಗೆ ಮಡಗಿ ಕಳಿಸಿರುವ ಒಂದೊಂದಾಣೆಯ ಟಪಾಲು ಚೀಟಿಗಳನ್ನು ತಮಗೆ ಮರಳಿ ಕಳಿಸಿಕೊಡುವೆನು.

ಇತಿ ನಮಸ್ಕಾರ

೪೮

**ಕೆ. ರಾಮಕೃಷ್ಣ ಸೋಮಯಾಜಿ** (ಕೃಷ್ಣರಾಜನಗರ) ೨೩-೫-೫೫

ಗೋವಿಂದ ಪೈ ಮಾಡುವ ನಮಸ್ಕಾರ. ತಮ್ಮ 17ನೆಯ ತಾರೀಕಿನ ಕಾರ್ಡು ಮೊನ್ನೆ ಮುಟ್ಟಿ ತಾವು ಅಪೇಕ್ಷಿಸಿರುವ ಮೇರೆಗೆ ಒಂದು ಕವನವನ್ನು ಇದರ ಒಳಗಡೆಯಲ್ಲಿ ಬರೆದು ಕಳುಹಿಸಿರುತ್ತೇನೆ. ನಾವು ಕೈಕೊಂಡ ಶ್ರೀ ತಿರುಪತಿಯ ಪ್ರಯಾಣ ಸುಖಕರವಾಗಿಯೇ ಇತ್ತು. ಆದರೆ ಇಲ್ಲಿಂದ ಹೊರಟಂದಿನಿಂದ ಮರು ಇಲ್ಲಿಗೆ ಬರುವವರೆಗೂ ಬಿಸಿಲಿನ ಬೇಗೆ ಮಾತ್ರ ಶಾನೆ ಇತ್ತು. ನನಗೆ ಆ ಕಾರಣ ಕೊಂಚ ದಣುವಾಗಿತ್ತು. ಅಲ್ಲಿಗೆ ಮುಟ್ಟಿದ 4–5 ದಿನಗಳಲ್ಲಿ ಆರಿ ಈಗ

ನೆಮ್ಮದಿಯಾಗಿದ್ದೇನೆ. ಶ್ರೀದೇವರ ದಯೆಯಿಂದ ತಮ್ಮಲ್ಲಿ ಆಗತಕ್ಕ ಈ ಸಾರಿಯು ಸಮ್ಮೇಲನದ ಅಧಿವೇಶನದ ಹೊತ್ತು ನಮ್ಮ ಮಳೆ ಹುಯ್ಯಲು ತೊಡಗುವ ಹೊತ್ತು ಸೂಜಿಮುತ್ತಾಗಿ ಒಂದೇ ಆಗುತ್ತದೆ. ಜೂನಿನಲ್ಲಿ ಇಡಿಯ ತಿಂಗಳೆಂಬಂತೆ ನಮಗೆ ಮಳೆಯು ಸುರಿತ. ಹೊರ ಹೊಮ್ಮಲಿಕ್ಕೆ ಈ ಪ್ರಾಯದಲ್ಲಿ ಮನಸ್ಸು ಅಳುಕುತ್ತದೆ. ಆದಕಾರಣ ಪ್ರಾಯಶಃ ಮೈಸೂರಿಗೆ ಹೋಗಲಾದೀತೆಂದು ಎಣಿಸುವುದಿಲ್ಲ. ಮತ್ತು ಈಶ್ವರೇಚ್ಛೆ. ಹೇಗೂ ಶ್ರೀ ದೇವರು ಎಣಿಸಿದಂತೆ ಆಗುತ್ತದೆ. ಶ್ರೀ ದೇವರು ತಮ್ಮನ್ನು ಸದಾ ಚೆನ್ನಾಗಿರಿಸಲಿ.

ಇತಿ ನಮಸ್ಕಾರ

೪೯

**ಜಿ. ಎನ್. ಲಕ್ಷ್ಮಣ ಪೈ** (ಪುತ್ತೂರು) ೨೧-೬-೫೫

ಗೋವಿಂದ ಪೈ ಮಾಡುವ ನಮಸ್ಕಾರ. ತಾವು ಪ್ರೀತಿಪೂರ್ವಕವಾಗಿ ಕಳುಹಿಸಿರುವ ಭಗವಾನ್ ಶ್ರೀ ರಮಣ ಮಹರ್ಷಿಯವರ 'ಉಪದೇಶಸಾರ'ಕ್ಕೆ ತಾವು ರಚಿಸಿದ ಕನ್ನಡ ಪದ್ಯಾನುವಾದದ ಪ್ರತಿ ಇವತ್ತು ಕೈಸೇರಿ, ತಮಗೆ ಆ ಬಗ್ಗೆ ತುಂಬ ಧನ್ಯವಾದಗಳು. ಕಳೆದ ೧೯೫೪ನೆಯ ಇಸವಿಯಲ್ಲಿ ಶ್ರೀ ಭಗವಾನರ ಅಪೇಕ್ಷೆಯ ಮೇರೆಗೆ ಆಶ್ರಮದಿಂದ ನನಗೆ ಕಳುಹಿಸಲ್ಪಟ್ಟ ಸೂಚನೆಯನ್ನು ಅಂಗೀಕರಿಸಿ ನಾನು 'ಉಪದೇಶಸಾರ'ವನ್ನು ಕಾವ್ಯಕಂಠ ಶ್ರೀ ಗಣಪತಿ ಶಾಸ್ತ್ರಿಗಳವರ ಮೂಲ ತಮಿಳು ಕೃತಿ ಹಾಗೂ ಅದರ ಇಂಗ್ಲೀಷು ಭಾಷಾಂತರವೇ ಮೊದಲಾದುವನ್ನು ಆಧರಿಸಿ ಕನ್ನಡ ಪದ್ಯಗಳಲ್ಲಿ ಭಾಷಾಂತರಿಸಿ ಆಶ್ರಮಕ್ಕೆ ಕಳುಹಿಸಿದೆ. ಆದರೆ ಯಾವ ಕಾರಣದಿಂದಲೇನೋ ಅದು ಈವರೆಗೆ ಪ್ರಕಟಿಸಲ್ಪಡದೆ, ಆಶ್ರಮದ ಬೀಗದೊಳಗೇನೇ ಇದೆ. ಆ ಕಾರಣ ತಮ್ಮ ಅನುವಾದವು ಪ್ರಕಟವಾಗಿ ಆ ಕೃತಿಯ ಕನ್ನಡ ಅನುವಾದವಿಲ್ಲವೆಂಬ ಕೊರಿಕೆಯನ್ನು ಸಂಕಲ್ಪವಾಗಿ ಹೋಗಲಾಡಿಸಿದೆ. ತಮ್ಮ ಕೃತಿಯನ್ನು ಓದಿ ನೋಡಿದೆ. ಬಹಳ ಚಲೋದಿದೆ. ತಮ್ಮನ್ನು ಮನಸಾರೆ ಅಭಿನಂದಿಸುತ್ತೇನೆ.

ಇತಿ ನಮಸ್ಕಾರ

೫೦

**ವರದರಾಜ ಹುಯಿಲಗೋಳ** (ಧಾರವಾಡ) ೮-೮-೧೯೫೫

ಗೋವಿಂದ ಪೈ ಮಾಡುವ ನಮಸ್ಕಾರ. ತಮ್ಮ ೩ನೆಯ ತಾರೀಖಿನ ಪತ್ರ ಹಾಗೂ ಅದರೊಡನೆ ಮಡಗಿ ಕಳುಹಿಸಿದ Canara Bankನ ಮೇಲೆ ತಾವು ಕಳುಹಿಸಿರುವ ಮೂವತ್ತು ರೂಪಾಯಿಗಳ (ರೂಪಾಯಿ ೩೦) ೨೬೧೯೫೯ನೆಯ ನಂಬರಿನ ಚೆಕ್ಕು ಮತ್ತು ಒಂದಾಣೆಯ Revenue stamp ಕೂಡ ಹಚ್ಚಿ ಕಳುಹಿಸಿರುವ ನನ್ನ ರಸೀದಿಯ form ಮತ್ತು ನನ್ನ ಪ್ರತ್ಯುತ್ತರವನ್ನು ತಮಗೆ ಬರೆದು ಕಳಿಸುವ ಬಗ್ಗೆ ೨ ಆಣೆಯ ಟಪ್ಪಾಲು ಚೀಟನ್ನು ಅಂಟಿಸಿ ಕಳುಹಿಸಿದ ತಮ್ಮ ವಿಳಾಸದ ಲಕೋಟೆ,

ಇವೆಲ್ಲವೂ ಇಲ್ಲಿಗೆ ಇವತ್ತು ಮುಟ್ಟಿ ಆ ಬಗ್ಗೆ ತಮಗೆ ತುಂಬ ಕೃತಜ್ಞನಾಗಿರುತ್ತೇನೆ. ಚೆಕ್ಕನ್ನು ಧನ್ಯವಾದ ಪುರಸ್ಕರವಾಗಿ ಸ್ವೀಕರಿಸಿದ್ದೇನೆ, ಹಾಗೂ ತಾವು ಕಳುಹಿಸಿರುವ ರಸೀದಿಗೆ ನನ್ನ ಸಹಿ ಹಾಕಿ ಅದನ್ನೂ ಪ್ರತ್ಯುತ್ತರವನ್ನೂ, ತಾವು ಕಳುಹಿಸಿದ ಲಖೋಟೆಯಲ್ಲೇ ಮಡಗಿ ತಮಗೆ ಕಳುಹಿಸಿರುತ್ತೇನೆ. ತಮ್ಮ ಉಪಕಾರವನ್ನು ಸ್ಮರಿಸುತ್ತೇನೆ. ಪೂಜ್ಯ ಹಿರಿಯರಾದ ಶ್ರೀ ಆಲೂರು ವೆಂಕಟರಾಯರಿಗೆ ನಾನು ಅವರ ಕಾಲುಗಳನ್ನು ಮನಸ್ಸಿನಲ್ಲಿ ಹಿಡಿದು ವಂದಿಸಿರುತ್ತೇನೆ ಎಂದು ದಯಮಾಡಿ ತಿಳಿಸುವ ಉಪಕಾರವನ್ನು ಮಾಡಬೇಕಾಗಿ ಬಿನ್ನಹ. ಕಳೆದ ೧೯೫೦ನೆಯ ಡಿಸೆಂಬರ ೨೪ನೆಯ ತಾರೀಕಿನಂದು ಮುಂಬಯಿಯಲ್ಲಿ ಆರಂಭಿಸಿದ ಕನ್ನಡ ಸಾಹಿತ್ಯ ಸಮ್ಮೇಲನದ ೨೪ನೆಯ ಅಧಿವೇಶನದ ಅಧ್ಯಕ್ಷನಾಗಿ ಆ ಸಭಾ ಮಂದಿರವನ್ನು ಹೊಕ್ಕು ವೇದಿಕೆಯನ್ನು ಏರಿ ನನ್ನ ಆಸನದ ಕಡೆಗೆ ಹೋಗುವಾಗ ಅಲ್ಲಿ ನೆರೆಯಲ್ಲೇ ಮಂಡಿಸಿದ ಆ ವಯೋವೃದ್ಧ, ಜ್ಞಾನವೃದ್ಧರಾದ ಪೂಜ್ಯ ಮಹನೀಯರ ಕಾಲು ಹಿಡಿದು ಆ ಮೇಲೆ ನನ್ನ ಪೀಠದಲ್ಲಿ ನಾನು ಮಂಡಿಸಿದ ನೆನಪು ನನಗೆ ಈಗಲೂ ಚೆನ್ನಾಗಿದೆ. ಅವರ ಆರೋಗ್ಯ ಚೆನ್ನಾಗಿದೆಯಷ್ಟೇ. ಶ್ರೀ ದೇವರು ಅವರಿಗೆ ದೀರ್ಘಾಯುರಾರೋಗ್ಯಾದಿ ಸಕಲ ಭಾಗ್ಯವಿತ್ತು ಚಿರಕಾಲ ಬಾಳುವಂತೆ ಅವರನ್ನು ಕಾಪಾಡುತ್ತಿರಲಿ ಎಂದು ಆತನನ್ನು ಪ್ರಾರ್ಥಿಸುತ್ತೇನೆ.

ಇನ್ನು ವಿಶೇಷವೇನು ಬರೆಯಲಿ? ಶ್ರೀ ಆಲೂರು ವೆಂಕಟರಾಯರಿಗೊಂದು ಪ್ರಶಸ್ತಿ ಗ್ರಂಥವನ್ನು ಸಮರ್ಪಿಸಲಿಕ್ಕಿದೆ ಎಂದೇ ಅದರ ಬಗ್ಗೆ Veternary ಡಾಕ್ತರ್ ಶ್ರೀ ಕೆ. ಜಿ. ಮಣೂರರು ನನಗೆ ಕೆಲಕಾಲದ ಹಿಂದೆ ಬರೆದ ಮೇರೆಗೆ ಅವರಿಗೆ ಒಂದು ಲೇಖ, ಒಂದು ವೈದಿಕ ಕವಿತೆ, ಹೀಗೆ ಎರಡನ್ನೂ ನಾನು ಕಳುಹಿಸಿ ಕೊಟ್ಟಿದ್ದೆ. ಅದರ ಕಥೆ ಏನಾಯಿತು? ಬಲ್ಲಿರಾ?

ಪ್ರೀತಿ ಏಕರೀತಿಯಾಗಿ ಇರಲಿ!
ಅದೇ ಮುಖ್ಯವಾಗಿ ಬೇಕಾದುದು.

ಇತಿ ನಮಸ್ಕಾರ

೫೧

**ಎನ್. ಎ. ಶೀನಪ್ಪ ಹೆಗ್ಗಡೆ (ಮಂಗಳೂರು)** ೨೬-೮-೧೯ [?]

ತಮ್ಮ ೧೫ನೆಯ ತಾರೀಖಿನ ಪತ್ರವು ಮಡಗಿದ್ದ ತಮ್ಮ ಪುಳಿನಾಪುರ ಮಹಾತ್ಮ್ಯದ ೨ ಪ್ರತಿಗಳು ಇಲ್ಲಿಗೆ ಬರುವಂದು ನಾನು ಇಲ್ಲಿ ಇದ್ದಿರಲಿಲ್ಲ. ಮದ್ರಾಸಿಗೆ ಹೋಗಿದ್ದೆ. ನಿನ್ನೆ ಸಂಜೆ ಇಲ್ಲಿಗೆ ಮರಳಿ ಬಂದಿರುವೆನಷ್ಟೆ. ಮದ್ರಾಸಿನಲ್ಲಿ ಮಾಡಬೇಕಾದ ಕೆಲಸಗಳ ಒತ್ತಾಯದಿಂದ ಹಾಗೂ ಓಡಾಟದಿಂದ ತುಂಬ ಸೋತು ಹೋಗಿದ್ದೇನೆ. ಕೆಲದಿನಗಳಿಗೆ ಕೊಂಚ ದಣಿವಾರಿಸುತ್ತಲೇ, ತಮ್ಮ ಪುಸ್ತಕವನ್ನು ಓದಿ ನೋಡುವೆನು. ಅವರೆಗೆ ಕ್ಷಮಿಸಬೇಕಾಗಿ ಅಪೇಕ್ಷಿಸುತ್ತೇನೆ.

ಇತಿ ನಮಸ್ಕಾರ

೫೨

## ಆರ್. ಎನ್. ಮೂರ್ತಿ (ದಾವಣಗೆರೆ)

೧-೯-೫೫

ಗೋವಿಂದ ಪೈ ಮಾಡುವ ನಮಸ್ಕಾರ.

ತಮ್ಮ ಕಾರ್ಡು ಮೊನ್ನೆ ೨೯ನೆಯ ತಾರೀಕಿನಂದು ಇಲ್ಲಿಗೆ ಮುಟ್ಟುವಾಗ ಮಂಗಳೂರಿಗೆ ಹೋಗಿದ್ದೆ. ನಾನು ನಿನ್ನೆ ಸಂಜೆ ಇಲ್ಲಿಗೆ ಮರಳಿದ ಬಳಿಕ ಅದನ್ನು ಕಂಡೆನಷ್ಟೆ. ತಮ್ಮ ಅಪೇಕ್ಷೆಯ ಬಗ್ಗೆ ಧನ್ಯವಾದಗಳು. ಶ್ರೀ ಅ.ನ. ಕೃಷ್ಣರಾಯರಲ್ಲಿ ನನಗೆ ತುಂಬಾ ಗೌರವಾದರಗಳಿವೆ. ಅವರಿಗೂ ಅವರ ಹಿರಿಯ ಕಾದಂಬರೀಕಾರಿತ್ವಕ್ಕೂ ಪ್ರಶಸ್ತಿ ಸಲ್ಲಬೇಕೆಂಬುದು ಸಹಜವೇ. ಆ ಪ್ರಶಸ್ತಿಯನ್ನು ಅವರಿಗೆ ಇನ್ನು ೩ ವರ್ಷಗಳ ಬಳಿಕ ಅವರ ೫೦ನೆಯ ವರ್ಷ ತುಂಬುವಂದು ಅವರಿಗೆ ಗ್ರಂಥರೂಪವಾಗಿ ಸಮರ್ಪಿಸಬೇಕೆಂಬುದು ತೀರ ವಿಹಿತವೇ. ಆದರೆ ಇನ್ನೂ ೩ ವರ್ಷಗಳ ಮೇಲೆ ನೆರವೇರಬೇಕಾದ ಕಾರ್ಯವನ್ನು ಬಹಳ ಹೆಚ್ಚಾದರೆ ಅದಕ್ಕೆ ೧ ವರ್ಷದ ಮುಂಚಿತವಾಗಿ ಕೈಗೊಳ್ಳಬೇಕಲ್ಲದೆ ಇಷ್ಟು ಮುಂಚೆ ಆ ಬಗ್ಗೆ ತವಕಿಸಿದರೆ ಸರ್ವಥಾ ಉಚಿತವೆನಿಸದು ಎಂದು ನನ್ನ ಮನಃಪೂರ್ವಕವಾದ ನಂಬುಗೆ. ಮಾತ್ರವಲ್ಲ ಈ ಕುರಿತು ತಮ್ಮತ್ತಣ ಬಲ್ಲವರನ್ನು ವಿಚಾರಿಸಿ ಅವರು ಏನನ್ನುತ್ತಾರೆಂದು ತಿಳಕೊಳ್ಳುವುದು ಲೇಸು. ಹೇಗೂ ನನ್ನ ಮನಸ್ಸಿನ ಉಪದೇಶವನ್ನು ನಾನು ಮೀರಬಾರದು ಎಂಬ ಕಾರಣದ ಬಗ್ಗೆ ೧೯೫೮ರಲ್ಲಿ ಪ್ರಕಟಿಸಲ್ಪಡಬೇಕಾದ ಆ ಪ್ರಶಸ್ತಿ ಗ್ರಂಥದ ಬಗ್ಗೆ ಇಷ್ಟು ಮುಂಚೆ ಲೇಖವನ್ನು ಕಳುಹಿಸಿ ಕೊಡುವರೆ ನನ್ನ ಮನಸ್ಸನ್ನು ಒಡಂಬಡಿಸಲಾರೆನೆಂದು ತಿಳಿಹಿಸುವರೆ ತುಂಬ ವಿಷಾದಿಸುತ್ತೇನೆ. ದಯಮಾಡಿ ಕ್ಷಮಿಸುವುದು. ಆವರೆಗೆ ಬದುಕಿದ್ದು ಶ್ರೀದೇವರು ನನ್ನ ಶಾರೀರಕ ಹಾಗೂ ಮಾನಸಿಕ ಶಕ್ತಿಯನ್ನು ಇಂದಿನಂತೆ ಇರಗೊಟ್ಟರೆ ಮತ್ತು ತಾವು ದಯಮಾಡಿ ಲೇಖದ ಕುರಿತು ನನಗೆ ಯಥಾಕಾಲದಲ್ಲಿ ನೆನವರಿಸುವಿರಾದರೆ, ನನ್ನದೊಂದು ಲೇಖವನ್ನು ಮಿತ್ರವರ್ಯರಾದ ಶ್ರೀ ಅ.ನ. ಕೃಷ್ಣರಾಯರ ಪ್ರಶಸ್ತಿ ಗ್ರಂಥದ ಬಗ್ಗೆ ಕಳುಹಿಸಿಕೊಡುವೆ. ಸದ್ಯಕ್ಕೆ ದಯಮಾಡಿ ಕ್ಷಮಿಸಬೇಕಾಗಿ ಮತ್ತೊಮ್ಮೆ ವಿನಂತಿಸುತ್ತೇನೆ. ತಾವು ಕೈಗೊಳ್ಳಲಿಕ್ಕೆ ಇಚ್ಛಿಸಿರುವ ಕಾರ್ಯವು ಯಶಸ್ವಿಯಾಗಿ ಕೈಗೂಡುವಂತೆ ಶ್ರೀದೇವರು ಅನುಗ್ರಹಿಸಲಿ ಎಂದು ಆತನಲ್ಲಿ ಪ್ರಾರ್ಥಿಸುತ್ತೇನೆ.

ಇತಿ ನಮಸ್ಕಾರ

೫೩

೪-೬-೫೫

## ಡಿ. ಪುಟ್ಟಸ್ವಾಮಿ (ಮಂಗಳೂರು)

ಗೋವಿಂದ ಪೈ ಮಾಡುವ ನಮಸ್ಕಾರ. ತಮ್ಮ ಅಕ್ಕರೆಯ ಬಂಧುವರ್ಯರೂ, ನನ್ನ ಮಾನ್ಯ ಮಿತ್ರವರ್ಯರೂ ಆದ ಶ್ರೀ ಶ್ರೀ ಮಂಜಯ್ಯ ಹೆಗ್ಗಡೆಯವರು ಮೊನ್ನೆ 3ನೆಯ ತಾರೀಕಿನಂದು ಬುಧುವಾರ ರಾತ್ರಿ ಪರಂಧಾಮವೈದಿದರೆಂದು

ನಿನ್ನೆ ಸಂಜೆ ಇಲ್ಲಿ ಕೈಸೇರಿದ ಮಂಗಳೂರಿನ "ಸಂಧ್ಯಾದೀಪ" ಎಂಬ ಪತ್ರಿಕೆಯಲ್ಲಿ ಕಂಡು ವಿಷಣ್ಣನಾದೆ......ನನಗೆ ಅವರಲ್ಲಿ, ಅವರ ಸೌಜನ್ಯದಲ್ಲಿ, ಅವರ ಔದಾರ್ಯದಲ್ಲಿ ಅಷ್ಟು ಗೌರವಾದರಗಳಿದ್ದುವು ......॥ ಓಂ ಶಾಂತಿಃ ಶಾಂತಿಃ ಶಾಂತಿಃ ॥

ಕೆನರಾ ಹೈಸ್ಕೂಲನ್ನು ಅಸ್ತಿತ್ವಕ್ಕೆ ತಂದ ಆದರ್ಶ ಪುರುಷರಾದ ಶ್ರೀ ಶ್ರೀ ಅಮ್ಮೆಂಬಳ ಸುಬ್ರಾಯ ಪೈಯವರು ೧೯೦೯ರಲ್ಲಿ ವೈಕುಂಠವಾಸಿಯರಾದ ಬಳಿಕ ತಮ್ಮ ಅಣ್ಣ ಶ್ರೀ ಶ್ರೀ ಮಂಜಯ್ಯ ಹೆಗ್ಗಡೆಯವರನ್ನು ಬಿಟ್ಟು ನಮ್ಮ ನಾಡಿನಲ್ಲಿ ಬೇರೊಬ್ಬ ಆದರ್ಶ ಪುರುಷರನ್ನು ನಾನು ಕಂಡಿಲ್ಲ.......ಅವರ ಸೌಶೀಲ್ಯವನ್ನು ಹೊಗಳಲಿಕ್ಕೆ ಒಂದು ಬಾಯಿ ಸಾಲದು. ಅವರ ಸತ್ಕಾರ್ಯಗಳನ್ನು ಎಣಿಸಲಿಕ್ಕೆ ಎರಡು ಕೈಗಳು ಸಾಲವು. ಅವರನ್ನು ಕೊಂಡಾಡಿದಷ್ಟು ಮಾತುಗಳೇ ಸೋಲುತ್ತವಲ್ಲದೆ ಅವರ ಸದ್ಗುಣಗಳು ಬಡವಾಗುವಂತಿಲ್ಲ.

ಅವರು ಅಲ್ಲಿಂದ ಇಲ್ಲಿವರೆಗೂ ಏಕಾಗ್ರಚಿತ್ತದಿಂದ ಆರಾಧಿಸಿದ ಆ ಜಿನನಾಥನೂ ಆ ಮಂಜುನಾಥನೂ ಅವರು ಇಬ್ಬರಲ್ಲ, ನಿಜವಾಗಿ ಅನನ್ಯರಾದರೂ ಲೋಕವಾಡಿಕೆಯಲ್ಲಿ ಹೇಗೂ ಅನ್ಯಾನ್ಯರೆಂದು ಭಾವಿಸಲ್ಪಡುತ್ತಾರಷ್ಟೆ? ಹೆಗ್ಗಡೆಯವರ ಆತ್ಮಕ್ಕೆ ಉತ್ತರೋತ್ತರ ಸದ್ಗತಿಯನ್ನಿತ್ತು ಕೈವಲ್ಯವನ್ನು ಕೈಗೊಳಿಸಲಿ ಎಂದು ಭಕ್ತಿಪೂರ್ವಕವಾಗಿ ಪ್ರಾರ್ಥಿಸುತ್ತೇನೆ.

॥ ಓಂ ಶಾಂತಿಃ ಶಾಂತಿಃ ಶಾಂತಿಃ ॥

ಇತಿ ನಮಸ್ಕಾರ

೫೪

**ಆರ್. ಎನ್. ಮೂರ್ತಿ (ದಾವಣಗೆರೆ)**

೧೯-೧-೫೬

ಗೋವಿಂದ ಪೈ ಮಾಡುವ ನಮಸ್ಕಾರ. ತಮ್ಮ ೧೭ನೆಯ ತಾರೀಕಿನ ಕಾರ್ಡು ಮುಟ್ಟಿ ಧನ್ಯವಾದಗಳು. ನನಗೆ ಇದೇ ತಿಂಗಳ ೬ನೆಯ ತಾರೀಕಿನಿಂದ ಕೆಲದಿನಗಳಿಗೆ ಬಂದ ಜ್ವರದಿಂದ ಉಂಟಾದ ನಿತ್ರಾಣ ಇನ್ನೂ ನೀಗಿಲ್ಲದ ಕಾರಣ ಈ ಬಾರಿ ತಮ್ಮ ಅಪೇಕ್ಷೆಯನ್ನು ಸಲ್ಲಿಸಲಾರೆನೆಂದು ತುಂಬಾ ವಿಷಾದಿಸುತ್ತೇನೆ. ದಯಮಾಡಿ ಕ್ಷಮಿಸುವುದು – ಅದಲ್ಲದೆ ಕನ್ನಡ ಸಾಹಿತ್ಯದಲ್ಲಿ ಮಾತ್ರ ಬಂದಿಷ್ಟೇನೋ ದುಡಿಯಲಾಪೆನಲ್ಲದೆ, ನೃತ್ಯಕಲೆ, ಗಾನಕಲೆ ಮುಂತಾದುವನ್ನು ಕುರಿತು ನಾನು ಅ-ಆ ಕೂಡ ಅರಿಯೆನಾದ ಕಾರಣ, ಅರಿಯದ ಕೆಲಸವನ್ನು ಮಾಡಬೇಕೆಂದು ನನ್ನನ್ನು ದಯಮಾಡಿ ಒತ್ತಾಯಪಡಿಸಬಾರದೆಂದು ವಿನಂತಿಸುತ್ತೇನೆ–ಶ್ರೀ ದೇವರು ತಮ್ಮ ಸದುದ್ದೇಶವು ಯಶಸ್ವಿಯಾಗುವಂತೆ ಅನುಗ್ರಹಿಸಲಿ ಎಂದು ಆತನಲ್ಲಿ ಪ್ರಾರ್ಥಿಸುತ್ತೇನೆ.

ಇತಿ ನಮಸ್ಕಾರಗಳು

೫೫

**ಆರ್. ಎನ್. ಮೂರ್ತಿ (ದಾವಣಗೆರೆ)**

೨-೩-೧೯೫೬

ಗೋವಿಂದ ಪೈ ಮಾಡುವ ನಮಸ್ಕಾರ. ತಾವು ಪ್ರೀತಿಪೂರ್ವಕವಾಗಿ ಕಳುಹಿಸಿ ಕೊಟ್ಟಿರುವ ತಮ್ಮ 'ಕನ್ನಡ ಸಿರಿ'ಯ ಪ್ರಥಮ ಪ್ರಕಟನೆಯಾದ 'ನೃತ್ಯ' ಎಂಬ

ವಹಿ ಕಳೆದ ತಿಂಗಳ ೨೩ನೆಯ ತಾರೀಕಿಗೆ ಮುಟ್ಟುವಾಗ ನಾನು ಮಂಗಳೂರಿನಲ್ಲಿದ್ದೆ. ಅಲ್ಲಿ ಕೆಲದಿನ ಕಾಯಿಲೆಯಾಗಿದ್ದು ಒಂದೆರಡು ದಿನಗಳ ಹಿಂದೆ ಇಲ್ಲಿಗೆ ಮರಳಿ ಬಂದಿರುವೆನಷ್ಟೇ. ಆ ಕಾರಣದಿಂದ ಪ್ರತ್ಯುತ್ತರವನ್ನು ಬರೆಯಲಿಕ್ಕೆ ಆದ ಇಷ್ಟೊ ವಿಳಂಬದ ಬಗ್ಗೆ ದಯಮಾಡಿ ಕ್ಷಮಿಸಬೇಕಾಗಿ ವಿನಂತಿಸುತ್ತೇನೆ. ನನ್ನ ಅಭಿಪ್ರಾಯವನ್ನು ಶುಭಾಶಯವನ್ನು ಒಳಗಡೆ ಬರೆದಿರುತ್ತೇನೆ.

ಇತಿ ನಮಸ್ಕಾರ

## ಅಭಿಪ್ರಾಯ ಮತ್ತು ಶುಭಾಶಯ

ಗಜಗದ ಬುರುಡಿಯಲ್ಲಿ ಹಿಡಿಯುವಂಥಾ ಸೀಸೆಯ ಕಥೆಯನ್ನು ನನ್ನ ಚಿಕ್ಕಂದಿನಲ್ಲಿ ಕೇಳಿದ್ದೆ. ಈಗ ಈ ಅಂಗೈ ಗಾತ್ರದ 'ನೃತ್ಯ' ಎಂಬ ಚಿಕ್ಕ ವಹಿಯಲ್ಲಿ ಕುಣಿತವನ್ನು ಕುರಿತು ಬರೆದ, ಆದರೆ ಬಳ್ಳದಲ್ಲಿ ಹಿಡಿವಷ್ಟರ ಮಾಹಿತಿಯನ್ನು ತುಂಬಿಸಿರುವುದನ್ನು ಕಂಡೆ. ಆ ಮಾಹಿತಿಯಾದರೂ ಸಂಕ್ಷೇಪವಾಗಿದೆಯೇ ? ಇಲ್ಲ, ಎಸಳೆಸಳಾಗಿ ಸಾಕಷ್ಟು ಪ್ರಚುರವೂ ಆಗಿದೆ, ಬಹಳ ಸೊಗಸೂ ಆಗಿದೆ. ನೃತ್ಯವನ್ನು ಕುರಿತು ಏನು ತಿಳಿದುಕೊಳ್ಳಬೇಕೆಂದಿದೆಯೊ, ಅದನ್ನಿಲ್ಲಿ ವಿವರವಾಗಿ ಹೇಳಿದೆ. ಮತ್ತೂ ಒಂದು ಮಾತು. ಇದರ ಸಮರ್ಪಣೆಯೂ ಯಥಾರ್ಥವೂ ಯಥಾರ್ಹವೂ ಆಗಿ ಯಾರಿಗೆ ಆಗಬೇಕೋ, ಅವರಿಗೇ ಆಗಿದೆ. ಅವರನ್ನು ಕುರಿತ ಸರಸವಾದ ಬರಹವೂ ಇದರಲ್ಲಿದೆ. ಲೇಖಕ ಮಹಾಶಯರನ್ನು ಮನಃಪೂರ್ವಕವಾಗಿ ಅಭಿನಂದಿಸುತ್ತೇನೆ. ಹಾಗೂ 'ಕನ್ನಡ ಸಿರಿ'ಯ ಗ್ರಂಥ ಮಾಲೆಯಲ್ಲಿ ಇಂಥವೂ ಇದಕ್ಕೂ ಮೇಲಾದವೂ ಪುಸ್ತಕಗಳು ಬಾರಿಬಾರಿಗೆ ಹೊರಡುತ್ತಿರುವಂತೆಯೂ ಅವೆಲ್ಲವೂ ಕನ್ನಡ ನಾಡಿನ ಓದುಗ ಮಹಾಶಯರ ಮೆಚ್ಚುಗೆಗೆ ಪಾತ್ರವಾಗಿ ಚಿರಕಾಲ ಬಾಳುತ್ತಿರುವಂತೆಯೂ ಶ್ರೀ ದೇವರು ಅನುಗ್ರಹಿಸಲಿ ಎಂದು ಆತನಲ್ಲಿ ಪ್ರಾರ್ಥಿಸುತ್ತೇನೆ ಇತಿಶಮ್.

ವಿಜ್ಞಾಪನೆ: – ಈ ಅಭಿಪ್ರಾಯದ ಅಕ್ಷರಿಕೆಯನ್ನು (Spelling) ಪುನಃ ಪುನಃ ನೋಡಿರುತ್ತೇನೆ. ನನ್ನ ಮಟ್ಟಿಗೆ ತೀರ ಸರಿಯಾಗಿದೆ. ಆ ಕಾರಣ ಇದರ ೧ನೆಯ ಪಂಕ್ತಿಯಲ್ಲಿರುವ 'ಬುರುಡಿ' ಎಂಬ ಶಬ್ದವನ್ನು ಹಾಗೆಯೇ ಅಚ್ಚಾಗಿಸಬೇಕಲ್ಲದೆ, ಅವನ್ನು 'ಬುರುಡೆ' ಎಂದು ತಿದ್ದಬಾರದು (ಏಕೆಂದರೆ 'ಬುರುಡಿ' ಎಂದರೆ ಬಹಳ ಚಿಕ್ಕ ಬುರುಡೆ) ಹಾಗೂ ೧೩ನೆಯ ಪಂಕ್ತಿಯಲ್ಲಿರುವ 'ಕುರಿತ' ಎಂಬದನ್ನು 'ಕುರಿತು' ಎಂದು ಮಾಡಬಾರದು. ಅಲ್ಲಿ 'ಕುರಿತ' ಎಂದೇ ಇರಬೇಕು. ಬಹಳ ಉಪಕಾರ.

**೫೬**

**ಅನಂತರಾವ ಕೆ. ಭೋಸಗೆ** (ಶೇಡಬಾಳ) ೫-೪-೫೬

ಗೋವಿಂದ ಪೈ ಮಾಡುವ ನಮಸ್ಕಾರ. ತಾವು ಪ್ರೀತಿಪೂರ್ವಕವಾಗಿ ಕಳುಹಿಸಿರುವ 'ಕನೆ ಮೊಸರು' ಎಂಬ ಮಕ್ಕಳ ಚಿಕ್ಕ ಕಥೆಗಳ ಪುಸ್ತಕ ಇವತ್ತು ಇಲ್ಲಿಗೆ

ಮುಟ್ಟಿದೆ. ಆ ಬಗ್ಗೆ ತುಂಬ ಧನ್ಯವಾದಗಳು, ಓದಿದೆ. ಕಥೆಗಳೆಲ್ಲ ಮಕ್ಕಳಿಗೆ ತಕ್ಕಂತಿವೆ, ಇನಿದಾಗಿವೆ, ಚಲೋದಾಗಿವೆ, ತಮ್ಮನ್ನು ಮನವಾರೆ ಅಭಿನಂದಿಸುತ್ತೇನೆ. ಹಾಗೂ ಈ ಚಿಕ್ಕ ಪುಸ್ತಕವು ಕೂಡಾ ನಾಡಿನಲ್ಲೆಲ್ಲ ಮಕ್ಕಳ ಅಕ್ಕರೆಗೂ ಅಯ್ಗಳರ ಮೆಚ್ಚುಗೆಗೂ ಪಾತ್ರವಾಗುವಂತೆಯೂ, ತಾವು ಈ ಮುಂದೆ ಇದಕ್ಕೂ ಮೇಲು ಮೇಲಾದ ಕೃತಿಗಳನ್ನು ರಚಿಸಿ ತಾನೆ ಯಶಸ್ವಿಯಾಗುವಂತೆಯೂ ಶ್ರೀ ದೇವರು ತಮ್ಮಲ್ಲಿ ಅನುಗ್ರಹಿಸಲಿ ಎಂದು ಆತನನ್ನು ಪ್ರಾರ್ಥಿಸುತ್ತೇನೆ.

ಇತಿ ನಮಸ್ಕಾರ

೫೭

**ಕೆ. ಎನ್. ಭಟ್ಟ ಶಿರಾಡಿಪಾಲ** (ಮುಂಡಾಜೆ) ೧೯-೫-೫೬

ಗೋವಿಂದ ಪೈ ಮಾಡುವ ನಮಸ್ಕಾರ. ತಮ್ಮ ಕಾರ್ಡು ನಿನ್ನೆ ಮುಟ್ಟಿತು. ನನ್ನ ಚಿಕ್ಕಂದಿನಲ್ಲಿ ಭರ್ತೃ ಹರಿಯ ಮೂರು ಶತಕಗಳ ಮೂಲಪದ್ಯಗಳು ಕನ್ನಡ ಅಕ್ಷರಗಳಲ್ಲಿ ಛಾಪೆಯಾಗಿದ್ದು ಅವಕ್ಕೆ ಕನ್ನಡ ಪ್ರತಿಪದಾರ್ಥವೂ, ಸರಳಾನುವಾದವೂ ಉಳ್ಳ ಒಂದು ಪುಸ್ತಕವು ಮೈಸೂರಿನಲ್ಲೊ ಬೆಂಗಳೂರಿನಲ್ಲೊ ಪ್ರಕಟವಾಗಿದ್ದು ಅದರ ಪ್ರತಿಗಳು ಮಂಗಳೂರಿನಲ್ಲಿ ಬೆಲೆಗೆ ದೊರೆಯುತ್ತಿದ್ದುವು. ಆ ಗ್ರಂಥದ ಒಂದು ಪ್ರತಿ ನನ್ನ ಕೀ॥ ತಾಯಿಯವರ ಚಿಕ್ಕಪ್ಪನವರಾದ ಮಂಜೇಶ್ವರದ ಕೈ. ವಾ. ನರಸಯ್ಯ ಶ್ಯಾನುಭಾಗರೆಂಬ ಶ್ರೀಮಂತರ ಪುಸ್ತಕ ಭಂಡಾರದಲ್ಲಿತ್ತು. ಅದನ್ನೋದಿದ ನೆನಪು ನನಗೆ ಚೆನ್ನಾಗಿದೆ. ಆ ಭಂಡಾರದ ಪುಸ್ತಕಗಳೆಲ್ಲವೂ ಕಳೆದ ೧೯೨೯ನೆಯ ಇಸವಿಯಲ್ಲಿ ಅವರು ದಿವಂಗತರಾದ ಮೇಲೆ ದಿಕ್ಕುಪಾಲಾಗಿ ಹೋಗಿವೆ. ಅದರ ಕ್ರಯ ಹೆಚ್ಚೆಂದರೆ ರೂ 2 ರೊಳಗೆ ಅಷ್ಟೆ. ಆ ಶತಕತ್ರಯೀಯ ಸಂಸ್ಕೃತ ಭಾಷ್ಯಸಹಿತವಾದ ಮೂಲ ಸಂಸ್ಕೃತ ಪ್ರತಿ ಮುಂಬಯಿಯ ನಿರ್ಣಯ ಸಾಗರ ಛಾಪಖಾನೆಯಲ್ಲಿ ಪ್ರಕಟವಾಗಿದೆ. ಅದರ ರಚಕನನ್ನು ಕುರಿತು ಏನೋ ಹೇಳಿರುವಂತೆ ನನಗೆ ನೆನಪಿಗೆ ತೋರುತ್ತದೆ. ಅದನ್ನು ತರಿಸಿ ನೋಡಿರಿ. ಅದರ 'ನೀತಿ ಶತಕ' ಮತ್ತು 'ವೈರಾಗ್ಯ ಶತಕ'ವನ್ನು ಮುಂಬಯಿಯ ಹಾಯ್ಕೋರ್ಟ್ ಜಡ್ಜು ಶ್ರೀ ಕೆ. ಟಿ. ತೆಲಂಗರು ಸಂಪಾದಿಸಿ ಪ್ರಕಟಿಸಿದ್ದರು. ಅದರಲ್ಲಿ ರಚಕನನ್ನು ಕುರಿತು ಕೊಂಚ ವಿವರವಿರುವಂತೆ ಕಂಡ ನೆನಪಿದೆ. ಅದರ ಪ್ರತಿ ಮಂಗಳೂರಿನ ಗವರ್ನಮೆಂಟ್ ಕಾಲೇಜಿನ ಲೈಬ್ರರಿಯಲ್ಲಿದೆ. (Government College Library, No. S 73 (& 73). ಕನ್ನಡ ಹಳೆಯ ಕೃತಿಗಳು ಪರಭಾಷೆಗಳಿಗೆ ಅನುವಾದಿಸಲ್ಪಟ್ಟಿರುವಂತೆ ಕಂಡ ನೆನಪು ನನಗಿಲ್ಲ.

ಇತಿ ನಮಸ್ಕಾರ

೫೮

**ಎನ್. ಎ. ಶೀನಪ್ಪ ಹೆಗ್ಗಡೆ** (ಮಂಗಳೂರು) ೧೩-೭-೫೬

ಕಾರವಾರದಲ್ಲಿರುವ ನನ್ನ ಪರಿಚಿತಿಯ ಐತಿಹಾಸಿಕ ಸಂಶೋಧಕರೊಬ್ಬರಿಗೆ ತಮ್ಮ 'ಬಲಿಯೇಂದ್ರೆ' ಎಂಬ ಪುಸ್ತಕದ ಅಗತ್ಯವಿದೆ ಎಂದು ಇವತ್ತು ಅವರ ಪತ್ರ

ಬಂದಿದೆ. ಅದರ ಪ್ರತಿ ಮಂಗಳೂರಿನಲ್ಲಿ ಎಲ್ಲಿ ದೊರೆಯುತ್ತದೆ? ಹಾಗೂ ಅದರ ಪ್ರಯೋಜನವೇನು? ಎಂದು ದಯಮಾಡಿ ಮರು ಟಪಾಲಿನಲ್ಲಿ ನನಗೆ ತಿಳಿಯಪಡಿಸುವ ಉಪಕಾರಮಾಡಬೇಕಾಗಿ ವಿನಂತಿಸುತ್ತೇನೆ. ಅನೇಕ ಧನ್ಯವಾದಗಳು. ಶ್ರೀ ಕೃಪೆಯಿಂದ ನಾನು ಕ್ಷೇಮದಿಂದಿರುತ್ತೇನೆ; ತಾವೂ ತಮ್ಮವರೆಲ್ಲರೂ ಕ್ಷೇಮದಿಂದಿರುತ್ತೀರಿ ಎಂದು ನಂಬುತ್ತೇನೆ. ಶ್ರೀ ದೇವರು ಹಾಗೆ ನಡೆಸಲಿ!

ಇತಿ ನಮಸ್ಕಾರ

೫೯

**ಎನ್. ಎ. ಶೀನಪ್ಪ ಹೆಗ್ಗಡೆ** (ಮಂಗಳೂರು) ೨೨-೭-೫೬

ನಾನು ತಮ್ಮೊಂದಿಗೆ ಅಪೇಕ್ಷಿಸಿದ ಪ್ರಕಾರ ತಾವು ಅಷ್ಟು ಮಮತೆಯಿಂದ ಕಳುಹಿಸಿ ಕೊಟ್ಟಿರುವ "ತುಳುವಾಲ ಬಲಿಯೇಂದ್ರೆ" ಎಂಬ ಪುಸ್ತಕ ನಿನ್ನೆ ನಾನು ಮಂಗಳೂರಿಗೆ ಹೋಗಿದ್ದಾಗ ಇಲ್ಲಿಗೆ ಮುಟ್ಟಿ, ನಿನ್ನೆ ಸಂಜೆ ನಾನು ಇಲ್ಲಿಗೆ ಮರಳಿ ಬಂದ ಮೇಲೆ ಅದನ್ನು ಕಂಡೆ. ತಮ್ಮ ಇಷ್ಟು ಕ್ಷಿಪ್ರವಾದ ಉಪಕಾರದ ಬಗ್ಗೆ ತಮಗೆ ಶಾನೆ ಕೃತಜ್ಞನಾಗಿರುತ್ತೇನೆ. ಶ್ರೀ ದೇವರು ತಮಗೆ ಸದಾ ಒಳ್ಳೆಯದು ಮಾಡಲಿ!

ಇತಿ ನಮಸ್ಕಾರ

೬೦

**ಎನ್. ಎ. ಶೀನಪ್ಪ ಹೆಗ್ಗಡೆ** (ಮಂಗಳೂರು) ೯-೮-೫೬

ಮತ್ತೂ ತಮಗೆ ತೊಂದರೆ ಕೊಡುತ್ತೇನೆ. ದಯಮಾಡಿ ಕ್ಷಮಿಸುವುದು. ತಾವು ಹಿಂದೊಮ್ಮೆ ನಾನು ತಮಗೆ ಬರೆದ ಪತ್ರಕ್ಕೆ ಕೂಡಲೆ ತಮ್ಮೊಂದಿಗೆ ಬೇಕೆಂದಿರುವ ಪುಸ್ತಕದ ಪ್ರತಿಯನ್ನೂ ಕಳುಹಿಸಿ ಕೊಟ್ಟಿರುತ್ತೀರಿ. ಆ ಬಗ್ಗೆ ನಿಮಗೆ ಎಷ್ಟು ಕೃತಜ್ಞನಾದರೂ ಸಾಲದು. ಆ ಪುಸ್ತಕವನ್ನು ಬೇಕೆಂದ ವ್ಯಕ್ತಿಯೇ ದಕ್ಷಿಣ ಕನ್ನಡ ಉತ್ತರ ಕನ್ನಡದ ಇತಿಹಾಸದಲ್ಲಿ ಸಂಶೋಧನವನ್ನು ನಡೆಸುತ್ತಿರುವ ಕಾರವಾರದ ಒಬ್ಬ ಕ್ರೈಸ್ತ ವಕೀಲರು. ಅಲ್ಲಿಗೆ ಹೋಗುವ ಮುಂಚೆ ತಮ್ಮ ಜಿಲ್ಲೆಯವರೇ ಮೊನ್ನೆ ನನಗೆ ಬರೆದಿರುವ ಪತ್ರದಲ್ಲಿ ೧೯೧೫ರಲ್ಲಿ ಮಂಗಳೂರಿನ ಶಾರದಾ ಛಾಪಖಾನೆಯಲ್ಲಿ ಅಚ್ಚಾಗಿ ತಾವು ಪ್ರಕಟಿಸಿರುವ "ದಕ್ಷಿಣಕನ್ನಡ ಜಿಲ್ಲೆಯ ಚರಿತ್ರೆ ಮತ್ತು ಭೂತಾಳ ಪಾಂಡ್ಯರಾಯನ ಅಳಿಯಕಟ್ಟು" ಎಂಬ ಪುಸ್ತಕದ ಪ್ರತಿ ಬೇಕೆಂದಿರುತ್ತಾರೆ. ತೇರು ಬೀದಿಯಲ್ಲಿರುವ ಪುಸ್ತಕ ವ್ಯಾಪಾರಿಗಳಾದ ತಮ್ಮ ಮಿತ್ರ ಶ್ರೀ ಬಿ. ದಾಮೋದರ ಬಾಳಿಗರಿಗೂ ಬರೆದಿರುತ್ತಾರಂತೆ. ಆ ಪುಸ್ತಕ ಈಗ ದೊರೆಯುವುದಿಲ್ಲವೆಂದು ಕೇಳಿರುತ್ತೇನೆ. ನನಗೆ ಮೊನ್ನೆಯೊಮ್ಮೆ ಜ್ವರವು ಬಂದಿತ್ತು. ಅದಾಗಿ, ಶ್ರೀ ಬಾಳಿಗರಿಗೆ ಬರೆದಿರುತ್ತೇನೆ – ತಮ್ಮ ಆ ಪುಸ್ತಕದ ಪ್ರತಿ ಮಂಗಳೂರಿನಲ್ಲಿ ದೊರೆತರೆ ಒಂದು ಪ್ರತಿಯನ್ನು V.P.P. ದ್ವಾರಾ ಆ ವಕೀಲರಿಗೆ

ಕಳುಹಿಸಿಕೊಡಿ ಎಂದು. ತಾವೀಗ ಬೆಲೆಯನ್ನು ಪಡಕೊಳ್ಳದೆ ಆ ಪುಸ್ತಕದ ಪ್ರತಿಯನ್ನು ಕಳುಹಿಸಿಕೊಡಬೇಕೆಂದಿಲ್ಲ. ಏಕೆಂದರೆ ಪುಸ್ತಕ ನನಗೇ ಅಲ್ಲ. ಹಣವಂತರಾದ ಬೇರೊಬ್ಬರಿಗೆ. ಆದಾಗಿ ಅದರ ಪ್ರತಿ ಕ್ರಯಕ್ಕೆ ದೊರೆಯುತ್ತದಾದರೆ ಎಲ್ಲಿ ? ಎಂದು ಆ ವಿಳಾಸವನ್ನು ನನಗೆ ಆದಷ್ಟು ಬೇಗ ಬರೆದು ತಿಳಿಸಿ ಉಪಕಾರ ಮಾಡಬೇಕಾಗಿ ವಿನಂತಿಸುತ್ತೇನೆ.

ಇತಿ ನಮಸ್ಕಾರ

೬೧

## ಎನ್. ಎ. ಶೀನಪ್ಪ ಹೆಗ್ಗಡೆ (ಮಂಗಳೂರು)

೧೬-೮-೫೬

ನಿಮ್ಮ ೧೧ನೆಯ ತಾರೀಕಿನ ಕಾರ್ಡು ಮುಟ್ಟಿತು. ನೀವೇ ನೇರವಾಗಿ ಕಾರವಾರದಲ್ಲಿರುವ ಅವರಿಗೆ ಬರೆದು ನೋಡಿ. ಅವರ ಹೆಸರು Mr. Severin Silva, B.A. LL B , Advocate, Karwar District. ಅವರು ಮಂಗಳೂರಿನವರಾದ ಕಾರಣ ಕನ್ನಡವನ್ನು ತಕ್ಕಷ್ಟಾದರೂ ಬರೆಯಬಲ್ಲರೆಂದು ತೋರುತ್ತದೆ. ಆದರೆ ಚೆನ್ನಾಗಿ ಓದಿ ತಿಳಿಯಲಾರರು. ಅವರು ಬೇಕೆಂದು ಕೇಳಿದ ಪುಸ್ತಕವನ್ನು ಕುರಿತು ನೀವೂ ಅವರೊಂದಿಗೆ ವಿಚಾರಿಸಿ ಅದು ಅವರಿಗೆ ಬೇಕೇ ಎಂದಾದರೆ ಮಂಗಳೂರಿನ ಐತಪ್ಪಶೆಟ್ಟಿಯಿಂದ ತರಿಸಿಕೊಂಡು ಬೇಕಾದರೆ ಕಳುಹಿಸಿಕೊಡುತ್ತೇನೆ ಎಂದು ಮುಂದಾಗಿ ತಿಳಿಸಿ. ಆದಕ್ಕವರು ಕಳುಹಿಸಿಕೊಡಿ ಎಂದು ನಿಮಗೆ ಬರೆದರೆ ಕಳಿಸಿರಿ. ಅದೇ ಪ್ರಕಾರ ನಿಮ್ಮ ಕಾರ್ಡಿನಲ್ಲಿ ನೀವು ಹೊಸದಾಗಿ ಸೂಚಿಸಿದ "ಪ್ರಾಚೀನ ತುಳುನಾಡು" ಎಂಬ ನಿಮ್ಮ ಪುಸ್ತಕದ ಹೆಸರನ್ನು ಅವರಿಗೆ ತಿಳಿಸಿ ಅದೂ ಬೇಕೋ ಎಂದು ಕೇಳಿ, ಬೇಕೆಂದರೆ ಕಳಿಸಿರಿ. ಅವರೊಂದಿಗೆ ಮುಂಚಿತವಾಗಿ ವಿಚಾರಿಸಿಯೇ V.P.P. ಮಾಡಿ ಕಳಿಸಿರಿ. ನೀವು ಅವರಿಗೆ ಮಾತ್ರ ಮೊದಲು ಬರೆದ ಪತ್ರದಲ್ಲಿ ನಾನು ನಿಮಗೆ ಸೂಚಿಸಿದ ಮೇರೆಗೆ ನೀವು ಬರೆಯುತ್ತೀರಿ ಎಂದು ಮೊದಲು ಮಾಡಿರಿ. ಬಹಳ ಉಪಕಾರ.

ಇತಿ ನಮಸ್ಕಾರ

೬೨

## ಅ. ಬಾಲಕೃಷ್ಣ ಶೆಟ್ಟಿ (ಪೊಳಲಿ)

೧-೯-೫೬

ಗೋವಿಂದ ಪೈ ಮಾಡುವ ಆಶೀರ್ವಾದ. ನಿನ್ನ ನಿನ್ನೆಯ ಕಾರ್ಡು ಇವತ್ತು ಮುಟ್ಟಿದೆ. ನಿಮ್ಮ 'ಕಿಶೋರ'ವು ಕೈಬರೆಹದ ಪತ್ರಿಕೆಯೊ ? ಅಚ್ಚಿನ ಪತ್ರಿಕೆಯೊ? ಎಂದು ಸ್ಪಷ್ಟವಾಗಿ ಬರೆದು ತಿಳುಹಿಸಬೇಕು. ನಿನ್ನ ಪ್ರತ್ಯುತ್ತರ ಕೈಸೇರುತ್ತಲೆ ನನ್ನ ಸಂದೇಶವನ್ನು ಬರೆದು ಕಳುಹಿಸುವೆನು.

ಕಳೆದ ೩-೪ ತಿಂಗಳಲ್ಲಿ ನನಗೆ ಬರುತ್ತಿರುವ ಜ್ವರದಿಂದ ನಿತ್ರಾಣ ಉಂಟಾಗಿ, ಈಗ ದೀರ್ಘ ಕವನವನ್ನು ಹೊಸದಾಗಿ ರಚಿಸಿ ಕಳುಹಿಸಲಿಕ್ಕೆ ಸಾಧ್ಯವಿಲ್ಲ. ಹಿಂದೊಮ್ಮೆ



ಚಿತ್ರಗಳು ಚಿತ್ರಿಸಿದ

ಬರೆದಿದ್ದು ಈ ಮುಂಚೆ ಪ್ರಕಟವಾದ ಕವಿತೆ ನಿನಗೆ ಒಪ್ಪಿಗೆಯಾದರೆ ಈಗ ನನ್ನಿಂದ ಉದ್ದವಾದ ಕವಿತೆಯನ್ನು ಸುಪ್ರತಿಸಲಾಗದಿರುವುದರಿಂದ ಚಿಕ್ಕದೊಂದನ್ನಾದರೂ ಬರೆದು ಕಳುಹಿಸಬಹುದು. ನನ್ನ ಭಾವಚಿತ್ರ ನನ್ನೊಂದಿಗೆ ಇಲ್ಲ. ಇರುವಂತೆ ನೆನಪಿಲ್ಲ. ಹಾಗೂ ನಾನು ಎಲ್ಲಿಯೂ ಕಳುಹಿಸುವುದೂ ಇಲ್ಲ. ದಯಮಾಡಿ ಕ್ಷಮಿಸಬೇಕಾಗಿ ವಿನಂತಿ.

ಇತಿ ನಮಸ್ಕಾರ

೬೩

**ಅಮ್ಮೆಂಬಳ ಶಂಕರನಾರಾಯಣ ನಾವಡ** (ಕೋಟೆಕಾರು) ೧೪-೯-೫೯

ಗೋವಿಂದ ಪೈ ಮಾಡುವ ನಮಸ್ಕಾರ.

ತಮ್ಮ ನಿನ್ನೆಯ ತಾರೀಕಿನ ಕಾರ್ಡು ಇವತ್ತು ಮುಟ್ಟಿತು. ನನ್ನ ಕಥನಕವನಗಳನ್ನೂ ಬೇರೆ ಕವಿತೆಗಳನ್ನೂ ತಾನು ಪ್ರಕಟಿಸುತ್ತೇನೆಂದು ಒಂದು ಕಡೆ ನನ್ನ ತಮ್ಮನ ಮಗ ಹೇಳುತ್ತಾನೆ. ಮತ್ತೊಂದು ಕಡೆ ಮುಂಬಯಿಯಲ್ಲಿಯ ನಮ್ಮವರದೊಂದು ಸಂಘವು ನನ್ನ ಈ ವರೆಗೆ ಪುಸ್ತಕ ರೂಪದಲ್ಲಿ ಪ್ರಕಟವಾದ ಹಾಗೂ ಆಯಾ ಪತ್ರಿಕೆಗಳಲ್ಲಿ ಮಾತ್ರ ಪ್ರಕಟವಾಗಿ ಪುಸ್ತಕರೂಪದಲ್ಲಿ ಬಾರದಿರುವ ಕವನಗಳನ್ನೆಲ್ಲಾ ತಾವು ಪ್ರಕಟಿಸುತ್ತೇವೆ ಎಂದು ಪ್ರಸ್ತಾಪವೆತ್ತಿರುತ್ತಾರೆ. ಇಕ್ಕಡೆಯವರಿಗೂ ಈಗ ಸದ್ಯಕ್ಕೆ ಕೊಂಚ ತಾಳಿ, ಅವನ್ನು ನನ್ನ ಜೀವಂತ ಕಾಲದಲ್ಲೇ ಪುಸ್ತಕರೂಪದಲ್ಲಿ ಬರಮಾಡಿಕೊಳ್ಳಬೇಕೋ? ಅಥವಾ ನನ್ನ ಬಳಿಕ ಅವು ಪ್ರಕಟವಾದರೆ ಲೇಸೋ? ಎಂದು ನನ್ನಲ್ಲೇ ವಿಚಾರಿಸಿ ನೋಡಿ, ಯಾವೊಂದು ನಿಶ್ಚಯಕ್ಕೆ ನಾನು ಬಂದ ಮೇಲೆ ನೋಡೋಣ ಎಂದು ಆ ಪ್ರಸಂಗವನ್ನು ಈಗ ಅಲ್ಲಿಗಲ್ಲಿಗೆ ಮಡಗಿಸಿರುತ್ತೇನೆ. ಆದಕಾರಣ ಆ ವರೆಗೆ ತಾವೂ ದಯಮಾಡಿ ತಾಳಬೇಕೆಂದು ವಿನಂತಿ. ಅಹುದು: 'ಪ್ರಜಾವಾಣಿ'ಯಲ್ಲಿ ಪ್ರಕಟವಾದ ಆ ಕಥೆಗಳನ್ನು ಈ ಪುಸ್ತಕದಲ್ಲಿ ಕೊಂಚ ಸಂಗ್ರಹಿಸಿರುವಂತೆ ನನಗೆ ಹೊಳೆಯಿತು. ಹಾಗೆ ಮಾಡಿದರೆ ನನ್ನದೇನೂ ಅಡ್ಡಿ ಇಲ್ಲವಾದುದರಿಂದ ಆ ಕುರಿತು ನಾನು ಹೆಚ್ಚಿಗೆ ಗಮನಿಸಿಲ್ಲ. ಅವರ ಪುಸ್ತಕದ ಮಟ್ಟಕ್ಕೆ ಬೇಕಾದಂತೆ ಅವರು ಸಂಗ್ರಹಿಸಿಕೊಂಡರೆ ನನಗೆ ನಷ್ಟವೇನು? ಅಹುದು. ಶ್ರೀ ರಾಜರತ್ನಂರು ಬರೆದ "ಸಂಸರ ಚರಿತ್ರು"ದ ಪ್ರತಿ ನನಗೂ ಬಂದಿರುತ್ತದೆ.

ಇತಿ ನಮಸ್ಕಾರ

೬೪

**ಜಿ. ಎಸ್. ಲಕ್ಷ್ಮಣ ಪೈ** ೧೫-೯-೫೬

Dear Sri Pai,
Your kind letter and the printed copies of your poem enclosed therewith to hand here last night. Thanks.

I am very sorry to say under the circumstances stated here-in-below.

I am unable to render you what help you have asked me to do.

The circumstances are as follows–

(1) From about a couple of months now there is an entirely different set of office bearers from the president to the staff of the Karnataka Sahitya Parishat and most of those new comers I do not know even by name, much less by acquaintance, while with about 2 or 3 of the top level officers mine is just a nodding acquaintance so that my words are never likely to have any effect on any of them.

(2) Even if it had been otherwise, I feel and I am pretty sure too, that any such poem or any other similar work of anyone else than a citizen of the Mysore State is never likely to have any chance of being adopted by the Parishat as its 'anthem', nor in preference to a similar work by a Mysorean, such a one would be submitted to the Parishat.

(3) All the world knows now that the forth-coming new state of Karnataka has been most mercilessly deprived of the only name 'Karnataka' which it should have rightly and rightfully had, and has now been christened 'Maha Mysore' (!!!), about which the less said the better. I for one however refuse to accept this unseemly and unbeseeming name and accordingly I shall deem it my conscientious duty to refrain from associating with anything that pertains to the new state on its new name. As such too, I am very sorry I cannot bring help—×—to anything for your poem nor any service to you in that direction which relates to the new state. Pray excuse. I wish you all success in your efforts to get your poem accepted by the K. S. Parishat and accepted as ನಾಡಗೀತ for the future Karnataka State. So God bless!

With kindest regards,

Yours sincerely

P.S : Not being quite well in the body for the last few days I have had to write this reply after the departure of both the... × ...today. Hence I have posted it today (15/9).

೬೫

**ಕೆ. ಎನ್. ಭಟ್ಟ ಶಿರಾಡಿಪಾಲ** (ಮುಂಡಾಜೆ) ೨೪-೯ ೫೬

ಗೋವಿಂದ ಪೈ ಮಾಡುವ ನಮಸ್ಕಾರ. ತಮ್ಮ ೨೦ನೆಯ ತಾರೀಕಿನ ಕಾರ್ಡು ಅದರೊಂದಿಗೆ 'ಸ್ವಾತಂತ್ರ್ಯ' ಮತ್ತು 'ಡಾಕ್ಟರ್ ಆರೋಗ್ಯಮ್' ಎಂಬ ೨ ವಹಿಗಳ ತಮ್ಮ ಅನುವಾದವೂ ಇವತ್ತು ಕೈ ಸೇರಿ ಆ ಬಗ್ಗೆ ಧನ್ಯವಾದಗಳು. ಅವೆರಡನ್ನೂ ಓದಿ ನೋಡಿದೆ. ಅನುವಾದ ಬಹಳ ಚೆನ್ನಾಗಿದೆ. ತಮ್ಮನ್ನು ಅಭಿನಂದಿಸುತ್ತೇನೆ. ಇನ್ನೂ ಇದೇ ಬಗೆಯ ಹಾಗೂ ಇತೋಪ್ಯತಿಶಯವಾದ ಸಾಹಿತ್ಯ ಸೇವೆಯನ್ನು ತಾವು ಬಹುಕಾಲ ಮಾಡುತ್ತಿರುವಂತೆ ಶ್ರೀ ಪರಮಾತ್ಮನು ತಮ್ಮಲ್ಲಿ ಅನುಗ್ರಹಿಸಲಿ ಎಂದು ಆತನಲ್ಲಿ ಪ್ರಾರ್ಥಿಸುತ್ತೇನೆ. ತಾವು ಹೆಸರಿಸಿದ ರಾಘವಾಂಕನ ಹರಿಶ್ಚಂದ್ರ ಕಾವ್ಯಕ್ಕೆ 'ಹರಿಶ್ಚಂದ್ರ ಕಾವ್ಯ ಸಂಗ್ರಹ' ಎಂದೂ 'ರಾಮಚಂದ್ರ ಚರಿತ ಪುರಾಣ'ಕ್ಕೆ 'ಪಂಪರಾಮಾಯಣ ಸಂಗ್ರಹ' ಎಂದೂ ಓದುಗರಿಗೆ ಸಾಕಷ್ಟು ನೆರವೀವ ಪುಸ್ತಕಗಳಾಗಿವೆ. ಅವು ಮೈಸೂರು ವಿಶ್ವವಿದ್ಯಾಲಯ ಕನ್ನಡ ಗ್ರಂಥಮಾಲೆಯಲ್ಲಿ ಪ್ರಕಟವಾಗಿವೆ. ಕೆಲ ವರ್ಷಗಳ ಹಿಂದೆ ಅವು ನಮ್ಮಲ್ಲಿಯ Intermediate ಪರೀಕ್ಷೆಗೆ ಪಠ್ಯಪುಸ್ತಕಗಳಾಗಿದ್ದುವು. ಆವಂದಿನ ವಿದ್ಯಾರ್ಥಿಗಳಿಂದ ಅವನ್ನು ದೊರಕಿಸಿಕೊಳ್ಳಬಹುದು.

ಇತಿ ನಮಸ್ಕಾರ

೬೭

**ಅಮ್ಮೆಂಬಳ ಶಂಕರನಾರಾಯಣ ನಾವಡ** (ಕೋಟೆಕಾರು) ೨೭-೯-೫೬

ಗೋವಿಂದ ಪೈ ಮಾಡುವ ನಮಸ್ಕಾರ.

ತಮ್ಮ ನಿನ್ನೆಯ ಕಾರ್ಡು ಇವತ್ತು ಮುಟ್ಟಿ ಆ ಬಗ್ಗೆ ಧನ್ಯವಾದಗಳು. ನನ್ನ ಮಿತ್ರವರ್ಯರಾದ ಶ್ರೀ ಏ. ಕೃಷ್ಣಶೆಟ್ಟರವರ ನೇತೃತ್ವದಲ್ಲಿ ಸ್ಥಾಪಿತವಾಗಿ ತಮ್ಮ ಅಧ್ಯಕ್ಷತೆಯಲ್ಲಿ ನಡೆಯುತ್ತಿರುವ 'ಪ್ರಧಾನ ಯುವಕ ಸಂಘ'ದ ಕಡೆಯಿಂದ ಇದೇ ಬರುವ ದಸರಾ ಮಹೋತ್ಸವದ ಸುಸಂದರ್ಭದಲ್ಲಿ ಪ್ರಕಟವಾಗಲಿಕ್ಕಿರುವ 'ಯುವಕ ಸಂದೇಶ'ವೆಂಬ ಕೈ ಬರಹದ ಪತ್ರಿಕೆಯನ್ನು ಕಂಡವರು ಓದಿದವರು ಎಲ್ಲರೂ ಮೆಚ್ಚಿ ಸೈ ಸೈ ಎನ್ನುವಂತೆಯೂ, ತಮ್ಮ ಸಂಘವು ತುಂಬ ಸಾಹಿತ್ಯ ಸೇವೆ ಸಮಾಜ ಸೇವೆಯನ್ನು ಮಾಡುತ್ತ ದೀರ್ಘಾಯುರಾರೋಗ್ಯವಂತವಾಗಿ, ಬಾಳುತ್ತಿರುವಂತೆಯೂ ಶ್ರೀ ದೇವರು ಅನುಗ್ರಹಿಸಲಿ ಎಂದು ಆತನಲ್ಲಿ ಪ್ರಾರ್ಥಿಸುತ್ತೇನೆ.

* * * *

ಶ್ರೀ ಬೇಂದ್ರೆಯವರ ಕವನಗಳು ಈವಂದೇ ಅಲ್ಲ, ಎಷ್ಟೋ ಹಿಂದಣಿಂದ ಪುಸ್ತಕ ರೂಪಗಳಲ್ಲಿ ಆಗಾಗ್ಗೆ ಪ್ರಕಟವಾಗುತ್ತಾ ಇವೆ. ಆದರೆ ಅವರಿಗೂ ನನಗೂ ಸರಿಯೇ ? ಅಟ್ಟಕ್ಕೂ ಬೆಟ್ಟಕ್ಕೂ ಗಂಟೇ ? ನನ್ನ ಬರೆಹಗಳು ಎಂದು ಪುಸ್ತಕರೂಪ ದಲ್ಲಿ ಅಥವಾ ಹೇಗೂ ಸಮಗ್ರವಾಗಿ ಪ್ರಕಟವಾಗಬೇಕೆಂದು ದೇವರಿಗೂ ಕಾಲಕ್ಕೂ ಅಥವಾ ಪ್ರಾರಬ್ಧಕ್ಕೂ ತೋರುತ್ತದೋ ಅಂದು ಪ್ರಕಟವಾದಾವು. ನನಗೇನೂ ಆ ಕುರಿತು ಆತುರವಿಲ್ಲ.

ಇತಿ ನಮಸ್ಕಾರ

೬೭

**ಬೈಕಾಡಿ ವೆಂಕಟಕೃಷ್ಣರಾವ** (ಬ್ರಹ್ಮಾವರ) ೧-೧೧-೫೬

ಗೋವಿಂದ ಪೈ ಮಾಡುವ ನಮಸ್ಕಾರ. ತಮ್ಮ ೧೬ನೆಯ ತಾರೀಕಿನ ಕಾರ್ಡು ಮುಟ್ಟಿ ಆ ಬಗ್ಗೆ ಧನ್ಯವಾದಗಳು. ನೋಡೋಣ, ಆಗ್ಗೆ ಆರೋಗ್ಯವು ಚೆನ್ನಾಗಿದ್ದರೆ ಮುದ್ದಣ ಜಯಂತಿಗೆ ಸರಿಯಾಗಿ ನಿಮ್ಮಲ್ಲಿಗೆ ಬಂದು ಹೋಗುವೆ. ಇಂದು ನಮ್ಮ ಹಬ್ಬದ ದಿನ. ಆದರೆ ಇವತ್ತು ನಮ್ಮ ತಾಯಿ ಜಿಲ್ಲೆಯ ಜೀವಮಾನದಲ್ಲಿ ಅದೊಂದು ಘೋರವಾದ ಮಹಾ ದುರ್ದಿನ !!! ಒಂದು ಕಡೆ ನಮ್ಮ ಜಿಲ್ಲೆಯಲ್ಲಿ ಎಷ್ಟೋ ನೂರು ವರ್ಷಗಳಿಂದ ಒಳಪಟ್ಟಿದ್ದ ನಮ್ಮ ಕಾಸರಗೋಡು ತಾಲ್ಲೂಕು ಕೇರಳಕ್ಕೆ ಆಹುತಿಯಾಯಿತು. ಮತ್ತೊಂದು ಕಡೆ ನಮ್ಮ ಜಿಲ್ಲೆಯ ಮಿಕ್ಕಪಾಲು ಏಕಮಾತ್ರವಾಗಿ ಸುಸಂಗತವೂ, ಮಂಗಲವೂ ಆಗಿರುವ "ಕರ್ನಾಟಕ" ಎಂಬ ಹೆಸರಿನ ಪ್ರಾಂತದಲ್ಲಿಲ್ಲ. ಮಹಾ ಮೈಸೂರೋ ವಿಸ್ತೃತ ಮೈಸೂರೋ, ವಿಶಾಲ ಮೈಸೂರೋ ಅಥವಾ ಮತ್ತೇನೋ ವಿಲಕ್ಷಣವಾದ ಹೆಸರುಳ್ಳ ಪ್ರಾಂತದಲ್ಲಿ ನುಗ್ಗಿಸಲ್ಪಟ್ಟಿತು !....ದೇವರು ಇನ್ನೂ ಏನೇನೆಲ್ಲ ದುರವಸ್ಥೆಗಳನ್ನು ತಂದೊಡ್ಡುವನೋ....

ಇತಿ ನಮಸ್ಕಾರ

೬೮

**ಬೈಕಾಡಿ ವೆಂಕಟಕೃಷ್ಣರಾವ** (ಬ್ರಹ್ಮಾವರ) ೧೫-೧೧-೫೬

ಗೋವಿಂದ ಪೈ ಮಾಡುವ ನಮಸ್ಕಾರ. ತಮ್ಮ ೧೦ನೆಯ ತಾರೀಕಿನ ಕಾಗದ ಇಲ್ಲಿಗೆ ನಿನ್ನೆ ಸಂಜೆ ಮುಟ್ಟಿತು. ಧನ್ಯವಾದಗಳು. ತಾವು ನನ್ನನ್ನು 'ಮುದ್ದಣ ಜಯಂತಿ'ಯ ಸಂದರ್ಭಕ್ಕೆ ತಮ್ಮಲ್ಲಿಗೆ ಬರಬೇಕೆಂದು ಆಮಂತ್ರಿಸಿದ್ದಾಗ ನಾನೆಣಿಸಿದ್ದೆ - ಆ ಜಯಂತಿ ಆತನು ಹುಟ್ಟಿದ (೨೪-೧-೧೮೭೦) ಜನವರಿ ೨೪ನೆಯ ತಾರೀಕಿನದೋ ಇಲ್ಲವೆ ಆತನು ದಿವಂಗತನಾದ (೨೫-೨-೧೯೦೧) ಫೆಬ್ರುವರಿ ೨೫ನೆ ತಾರೀಕಿನದೋ ಆಚರಿಸಲ್ಪಡುವುದೆಂದು ; ಹಾಗಾಗಿ ನಾನು ತಮ್ಮಲ್ಲಿಗೆ ಹೋಗುವರೆ ಸಮ್ಮತಿಸಿದೆ. ಆದರೆ ಈಗ ಕೈ ಸೇರಿದ ತಮ್ಮ ಪತ್ರದಿಂದ ತಿಳಿಯುತ್ತದೆ, ಆ ಜಯಂತಿಯನ್ನು ತಾವು ಇಲ್ಲಿಂದ ೧೦ ದಿನಗಳೊಳಗಣ ಇದೇ ನವಂಬರ ೨೫ನೆಯ ತಾರೀಖಿನಂದೊ ಅಥವಾ ಧರ್ಮಸ್ಥಳದ ದೀಪೋತ್ಸವ ಮುಗಿದ ಬಳಿಕಣ ಹಪ್ತೆಯಲ್ಲೋ ಅಂದರೆ ದಿಶಂಬರ ೩-೪ ರಿಂದ ೧೦ರೊಳಗೆ ನೆರವೇರಿಸಲಿಕ್ಕಿರುವಿರಿ, ಎಂದು.

ಈಗ ತಾವು ಸೂಚಿಸಿರುವ ಅವೆರಡೂ ಹೊತ್ತುಗಳಾದರೆ ನನಗೆ ಅನನುಕೂಲ. ಏಕೆಂದರೆ ಮೊನ್ನೆ ಕೆಲದಿನಗಳ ಹಿಂದೆ ನನಗೆ ಬಂದಿದ್ದ ಜ್ವರದಿಂದ ಕುಂದಿದ ಶಕ್ತಿ ಇನ್ನೂ ತುಂಬಿ ಬರುವಂತಿದೆಯಷ್ಟೇ. ಅದಾಗಿ ಬಸ್ಸಿನ ಪ್ರಯಾಣ ವಗೈರೆ ಕೈಗೊಳ್ಳಲಿಕ್ಕೆ ತೀರ ಅಸಾಧ್ಯ ಮಾತ್ರವಲ್ಲ, ಒಂದು ಪಕ್ಷ ನಾನು ಬರುವೆನೆಂದು ಹೊರಟರೂ ನನ್ನ ತಮ್ಮಂದಿರೂ ಅವರ ಮಕ್ಕಳೂ ಸರ್ವಥಾ ಒಡಂಬಡರು. ಆ ಮೇಲಣ ದಿಶಂಬರದ ೪ನೆಯ ತಾರೀಕಿನಿಂದ ೧೦ರ ವರೆಗೆ ಇಲ್ಲಿ ನಮ್ಮಲ್ಲಿಯ ದೀರ್ಘಾವಧಿಯ ರಥೋತ್ಸವದ ಗದ್ದಲ, ಅದರಲ್ಲಿ ನನಗೇನೂ ಮಾಡಲಿಕ್ಕಿಲ್ಲವಾದರೂ, ನಮ್ಮ ಮನೆಗೆ ನೆಂಟರಿಷ್ಟರು ಬರುವ ಆ ಹೊತ್ತಿಗೆ ಮನೆಯಲ್ಲಿ ನಾನಿಲ್ಲದಿದ್ದರೆ ಹೇಗಾದೀತು ? ತಾವೇ ಯೋಚಿಸಿರಿ.

ಈ ಕಾರಣಗಳಿಂದ ನನಗೆ ತೋಚುವುದೇನೆಂದರೆ ಈ ಬಾರಿಗೆ ದಯಮಾಡಿ ಕ್ಷಮಿಸಿ, ನನ್ನನ್ನು ಕಳೆದು ಬಿಟ್ಟು ಇತರರಿಂದ ತಮ್ಮ ಕಾರ್ಯವನ್ನು ನೆರವೇರಿಸಿಕೊಳ್ಳಿರಿ. ಆ ಬಗ್ಗೆ ತಮ್ಮ ಆ ಜಯಂತಿಯ ಆಚರಣೆಗೆ ಶ್ರೀ ದೇವರ ಹೆಸರಿನಲ್ಲಿ ಸಂಪೂರ್ಣ ಯಶಸ್ಸನ್ನು ನಾನು ಕೋರುತ್ತೇನೆ. ನನ್ನನ್ನು ಕಳೆದುಬಿಟ್ಟುದರಿಂದ ನನ್ನ ಮನಸ್ಸೇನೂ ನೋಯದೆಂದು ತಮಗೆ ಕಂಡಿತವಾಗಿ ಭರವಸೆ ಕೊಡುತ್ತೇನೆ.

ಅಥವಾ ಹಾಗೆ ಮಾಡದೆ ನಾನೇ ಬರಬೇಕೆಂದು (ದಯಮಾಡಿ ಅಷ್ಟರ ಮಟ್ಟಿಗೆ ಹಟಮಾಡಬೇಡಿ !) ಆ ಜಯಂತಿಯ ಆಚರಣೆಯನ್ನು ತಾವು ಜನವರಿ – ಫೆಬ್ರುವರಿ ತಿಂಗಳಿಗೆ ಮುಂದುವರಿಸಿಟ್ಟರೆ ಮುದ್ದಣನನ್ನು ಕುರಿತು ಇನ್ನೂ ಹೊಸತೊಂದು ಲೇಖನವನ್ನು ಬರೆವರೆ ಆ ತಕ್ಕ ತಾಳ್ಮೆ ಈ ಪ್ರಾಯದಲ್ಲೂ ಈ ಅನಾರೋಗ್ಯದಲ್ಲೂ ನನಗಿಲ್ಲದ ಕಾರಣ ನಾನು ಬಂದರೆ ಓದುವುದಾದರೆ ಕೆಲವರ್ಷಗಳ ಹಿಂದೆ ನಾನು ಆತನ water colour ಚಿತ್ರದ ಅನಾವರಣ ಸಂದರ್ಭದಲ್ಲಿ ಮಾಡಿದ ಭಾಷಣ (ಅದು ಅಚ್ಚಾಗಿದೆ), ಅದರಲ್ಲಿ ನಾನು ಆತನನ್ನು ಕುರಿತು ಮಾತನಾಡಿದುದಿದೆ, ಆತನ ಕೃತಿಗಳನ್ನಲ್ಲ. (ಆತನನ್ನು ಕುರಿತು ಇತರರು ಮಾತನಾಡಿದ್ದಾರು.) ಆ ಭಾಷಣ ಬಹಳ ಉದ್ದವಿಲ್ಲ. ಆ ಕಾರಣ ಅವನ ಕೃತಿಗಳನ್ನು ಕುರಿತು ಭಾಷಣಗಳು ಇರುವುದು ಲೇಸೆನಿಸುವುದರಿಂದ ಆ ಬಗ್ಗೆ ಏರ್ಪಡಿಸಬೇಕಾಗುತ್ತದೆ. ಕೊನೆಯದಾಗಿ ಇತ್ತೀಚೆಗೆ ಕೆಲಕಾಲದಿಂದ ನಾನು ಸಂಜೆ ೭-೮ರ ರಾತ್ರಿಗೆ ಮಲಗಲಿಕ್ಕೆ ಹೋಗುತ್ತೇನೆ. ಆದ ಕಾರಣ ರಾತ್ರಿಯ ತಾಳ-ಮದ್ದಳೆ ಕೇಳಲಿಕ್ಕೆ ಕೂತು ನಿದ್ದೆ ಕಳಕೊಳ್ಳುವರೆ ನನಗೆ ಸಾಧ್ಯವಿಲ್ಲ. ನನ್ನ ದುರದೃಷ್ಟ ಏನು ಮಾಡಲಿ ?

ಇತಿ ನಮಸ್ಕಾರ

೬೯

**ಅಮ್ಮೆಂಬಳ ಶಂಕರನಾರಾಯಣ ನಾವಡ** (ಕೋಟೆಕಾರು) ೧೧-೧೨-೫೬

ಗೋವಿಂದ ಪೈ ಮಾಡುವ ನಮಸ್ಕಾರ.

ತಮ್ಮ ನವಂಬರ ೨೮ನೆಯ ತಾರೀಕಿನ ಕಾರ್ಡು ಮುಟ್ಟಿದೆ. ಧನ್ಯವಾದಗಳು.

ನನ್ನ ಕವಿತೆಗಳನ್ನು ಪ್ರಕಟಿಸಲಿಕ್ಕೆ ತಮಗೆ ಅನುಮತಿಯನ್ನು ಕೊಡತಕ್ಕ ವಿಚಾರ ವನ್ನು ಯಥಾವಕಾಶವಾಗಿ ಮಾಡಿ, ಆ ಕುರಿತು ಹಿಂದಿನಿಂದ ಬರೆಯುವೆನು.

ತಮ್ಮ 'ಬಾಳ ಗೆಳತಿ' ಎಂಬ ಶೃಂಗಾರ ಕವನಗಳ ಸಂಕಲನವನ್ನು ನನ್ನ ಅನಾರೋಗ್ಯದ ದೆಸೆಯಿಂದ ಈ ವರೆಗೆ ಓದಿ ನೋಡಲಾಗದ ಬಗ್ಗೆ ದಯವಿಾಡಿ ಕ್ಷಮಿಸುವುದು. ಈ ಕಾರ್ಡು ಬಂದ ಕೆಲದಿನಗಳಲ್ಲೇ ಇಲ್ಲಿಯ ರಥಜಾತ್ರೆಯೂ ಮುಗಿದು ಬಿಡುವು ದೊರೆತೊಡನೆ ಅದನ್ನು ನಿನ್ನೆ ಮೊನ್ನೆ ಓದಿ ನೋಡಿದ್ದೆ. ಕವನಗಳೆಲ್ಲಾ ಬಹಳ ಸೊಗಸಾಗಿವೆ. ತಮ್ಮನ್ನು ಮನಸಾರೆ ಅಭಿನಂದಿಸುತ್ತೇನೆ. ಹಾಗೂ ಇವಕ್ಕೂ ಮೇಲಾದ ಕವಿತೆಗಳನ್ನು ತಾವು ರಚಿಸುತ್ತಿರುವಂತೆ ಶ್ರೀ ದೇವರು ಅನುಗ್ರಹಿಸಲಿ ಎಂದು ಆತನಲ್ಲಿ ಪ್ರಾರ್ಥಿಸುತ್ತೇನೆ.

ಇತಿ ಶಮ್ ನಮಸ್ಕಾರ

೭೦

**ಬೈಕಾಡಿ ವೆಂಕಟಕೃಷ್ಣರಾಯ** (ಬ್ರಹ್ಮಾವರ) ೮-೧-೫೭

ಗೋವಿಂದ ಪೈ ಮಾಡುವ ನಮಸ್ಕಾರ. ತಮ್ಮ 2ನೆಯ ತಾರೀಕಿನ ಕಾರ್ಡು ಮುಟ್ಟಿದೆ. ನಾನು ಕೆಲಕಾಲದಿಂದೀಚೆಗೆ ಅನಾರೋಗ್ಯದಲ್ಲಿದ್ದು ಅದರಿಂದೀಗ ಮೇಲಕ್ಕೆ ಬರುತ್ತಿರುವೆನಷ್ಟೆ. ಆದರೆ ಈಗ ತಮ್ಮಲ್ಲಿಗೆ ಹೋಗಿ ಬರಬಹುದೆಂದು ನನಗೆ ತೋರುವುದಾದರೂ ನನ್ನ ತಮ್ಮಂದಿರ ಮಕ್ಕಳು ನನಗೆ ಸದ್ಯಕ್ಕಾದರೂ ಎಲ್ಲಿಗೂ ಪ್ರಯಾಣ ಮಾಡಬಾರದೆಂದು ನಿರ್ಬಂಧಿಸುತ್ತಾರೆ. ಅವರನ್ನು ಸಮಜಾಯಿಸಿ ಬರಲಿಕ್ಕೆ ಪ್ರಯತ್ನಿಸುತ್ತೇನೆ. ಎಷ್ಟು ಮಾತ್ರಕ್ಕೂ ಬರಲಿಕ್ಕಾಗದಿದ್ದರೆ ನನ್ನ ಲೇಖವನ್ನಾದರೂ ತಮಗೆ ಬರೆದು ಕಳುಹಿಸುತ್ತೇನೆ; ತಾವದನ್ನು ಬೇಕಾದರೆ ಅಲ್ಲಿ ಓದಿಸಬಹುದು. ಈ ಮಧ್ಯೆ ನನಗೆ ಈ ಕೊಂಚ ಮಾಹಿತಿಯನ್ನು ತಿಳಕೊಳ್ಳಬೇಕಾಗಿದೆ. (೧) ಮಂಗಳೂರಿಂದ ಹೊಳೆ ದಾಟದೆ ಬ್ರಹ್ಮಾವರಕ್ಕೆ ಹೋಗಿಬರಲಿಕ್ಕೆ ಸಾಧ್ಯವಿದೆಯೋ? ಹಾಗಾದರೆ ಯಾವ ದಾರಿಯಾಗಿ ಹೋಗಬೇಕು? ಬೆಳಿಗ್ಗೆ ೫ ಯಾ ೬ ಗಂಟೆಗೆ ಹಾಗೆ ದಾರಿಯಾಗಿ ಮಂಗಳೂರಿಂದ ಹೊರಟು ಹೋಗುವ ಬಸ್ಸು ಇದೆಯೋ? ಟಿಕೇಟಿನ ದರ ಎಷ್ಟು? (ನನಗೆ ಎಲ್ಲಾ ವಿವರ ತಿಳಿಯಬೇಕಾದುದರಿಂದ ಟಿಕೇಟಿನ ದರವನ್ನೂ ಕೂಡಾ ವಿಚಾರಿಸಿರುವೆನಷ್ಟೇ) (೨) ಮಂಗಳೂರಿನಿಂದ ಬೆಳಿಗ್ಗೆ ೫ ಯಾ ೬ ಗಂಟೆಗೆ ಹೊರಟರೆ ತಮ್ಮಲ್ಲಿಯ ಭಾಷಣದ ಕೆಲಸ ತೀರಿಸಿ ಅದೇ ರಾತ್ರಿ ೮-೯ ಗಂಟೆಯೊಳಗೆ ಮಂಗಳೂರಿಗೆ ಬಂದು ಮುಟ್ಟಬಹುದೋ? (೩) ಬ್ರಹ್ಮಾವರದಲ್ಲಿ, ತತ್ಕಾಲಕ್ಕಾದರೂ ತಂಗಿಕೊಳ್ಳುವುದಾದರೆ ಯಾರಲ್ಲಿ? ಡಾ॥ ಶ್ರೀ ರಾಘವೇಂದ್ರ ಪೈಯವರು ಅಲ್ಲಿ ಈಗಲೂ ಇದ್ದಾರೋ? ನನ್ನ ಭಾಷಣದ ದಿನ ಬೇರೆ ಯಾವ ಕೆಲಸವನ್ನೂ ಇಟ್ಟುಕೊಳ್ಳಬಾರದು – ಯಕ್ಷಗಾನ ತಾಳಮದ್ದಳೆ, ಅದು ಇದು, ಏನೂ ಇರಬಾರದು. ನನ್ನ ಭಾಷಣವನ್ನು ಹೊತ್ತುಂಟೇ ಮುಗಿಸಿ ನನ್ನನ್ನು ತಮ್ಮಲ್ಲಿಂದ ಹೊರಡಿಸಬೇಕು. ತಾರೀಕಿನ

ಮೇರೆಗೆ ೨೪ನೆಯ ಜನವರಿ ಮುದ್ದಣನ ಜನ್ಮದಿನವಾದರೂ ನನ್ನ ಭಾಷಣವನ್ನು ನಾಡದು ಜನವರಿ ೨೮ನೆಯ ತಾರೀಕು ಆದಿತ್ಯವಾರಕ್ಕೆ ಹಾಕಬಹುದೋ ? ಎಂದು ವಿಚಾರಿಸಿ ತಿಳಿಸಿರಿ. ಮತ್ತೊಂದು ಮಾತು – ನನ್ನ ತಮ್ಮನೊಬ್ಬನ ಹಿರೇಮಗ ಮಂಗಳೂರಲ್ಲಿ ಎಡ್ವೋಕೇಟ್. ಅವನಿಗೆ (car) ಕಾರು ಉಂಟು. ಆದೀಗ ರಿಪೇರಿಗೆ (ದುರಸ್ತಿಗೆ) ಹೋಗಿದೆ. ನಾನು ಹೊರಡುವಷ್ಟರಲ್ಲಿ, ಆದು ದುರಸ್ತಾಗೆ ಬಂದರೆ ನಾನು ಅದರಲ್ಲಿ ತಮ್ಮಲ್ಲಿಗೆ ಬಂದು ಹೋಗುವೆನು. ಇಲ್ಲವೇ ಬಸ್ಸಿನಲ್ಲಿ ಬರುವೆನು. ಮಂಗಳೂರಿನಿಂದ ಬ್ರಹ್ಮಾವರಕ್ಕೆ ಉಡುಪಿಯ ಶ್ರೀ U. S Nayakರ (ಉಪೇಂದ್ರ ನಾಯಕರ) Hanuman Bus Company ಸರ್ವಿಸ್ ಉಂಟೋ ಎಂದು ತಿಳಿಸಿರಿ. ತೊಂದರೆ ಕೊಡಬೇಕಾದ ಬಗ್ಗೆ ಕ್ಷಮಿಸುವುದು. ಉಪಕಾರ.

ಇತಿ ನಮಸ್ಕಾರ

೭೧

**ಬೈಕಾಡಿ ವೆಂಕಟಕೃಷ್ಣರಾವ** (ಬ್ರಹ್ಮಾವರ) ೧೩-೧-೫೭

ಗೋವಿಂದ ಪೈ ಮಾಡುವ ನಮಸ್ಕಾರ. ಕ್ಷೇಮ. ತಮ್ಮ ೧೦ನೆಯ ತಾರೀಕಿನ ಪ್ರತ್ಯುತ್ತರ ಇಲ್ಲಿಗೆ ಬಂದು ಮುಟ್ಟುವಾಗ ನಾನು ಮಂಗಳೂರಿಗೆ ಹೋಗಿದ್ದೆನು. ನಿನ್ನೆ ಮಂಗಳೂರಿಗೆ ಹೋಗಿದ್ದೇನೆಂದರೆ ಡಾಕ್ಟರರನ್ನು ಕಾಣಲಿಕ್ಕೆ. ಅವರೊಂದಿಗೆ ಕೇಳಿದಾಗ, ಅವರೆಂದರು – ಇನ್ನೂ ಕೆಲಕಾಲಕ್ಕೆ ದೂರ ಪ್ರಯಾಣಮಾಡಬಾರದು. ಬಸ್ಸಿನ ಪ್ರಯಾಣವನ್ನು ಸದ್ಯಕ್ಕೆ ಮಾಡಲೇಬಾರದು, ಎಂದು. ಆ ಕಾರಣ ತಮ್ಮಲ್ಲಿಗೆ ನಾಡದು ೨೪ನೆಯ ತಾರೀಕಿಗೆ ಹೋಗಿ ಬರುವ ಆಲೋಚನೆಯನ್ನು ವಿಸರ್ಜಿಸಲೇಬೇಕಾಗಿದೆ ಎಂದು ತಿಳಿಸಲಿಕ್ಕೆ ವಿಷಾದಿಸುತ್ತೇನೆ. ನಾಡದು ೨೪ನೆಯ ತಾರೀಕಿನಂದು ತಮ್ಮಲ್ಲಿ ಜರಗಲಿಕ್ಕಿರುವ ಶ್ರೀ ಮುದ್ದಣ ಜಯಂತಿಯಂ ಆಚರಣೆ ತುಂಬ ಯಶಸ್ವಿಯಾಗಿ ನೆರವೇರುವಂತೆ ಶ್ರೀ ಪರಮಾತ್ಮ ದಯೆದೋರಲಿ ಎಂದು ಆತನನ್ನು ಪ್ರಾರ್ಥಿಸುತ್ತೇನೆ.

ಇತಿ ನಮಸ್ಕಾರ

೭೨

**ಅಮ್ಮೆಂಬಳ ಶಂಕರನಾರಾಯಣ ನಾವಡ** (ಕೋಟಕಾರು) ೯-೭-೫೭

ಗೋವಿಂದ ಪೈ ಮಾಡುವ ನಮಸ್ಕಾರ.

ತಮ್ಮ ೬ನೆಯ ತಾರೀಕಿನ ಕಾರ್ಡು ನಿನ್ನೆ ಸಂಜೆ ಇಲ್ಲಿಗೆ ಮುಟ್ಟಿತು. ಧನ್ಯವಾದ ಗಳು. ಶ್ರೀ ಸೋಮೇಶ್ವರ ಸೋಮನಾಥ ದೇವಾಲಯದ ಐತಿಹ್ಯವನ್ನು ಕುರಿತು ನಾನೇನೂ ಅರಿಯೆ. ಅಲ್ಲಿಯ ಶಿಲಾಶಾಸನವನ್ನು ಕುರಿತು ಅಲ್ಲಿ ಒಂದು ಶಿಲಾಶಾಸನ ವಿದೆ ಎಂದು ಕೇಳಿರುವೆನಲ್ಲದೆ, ಅದನ್ನು ಕಂಡಿಲ್ಲ. ಅದೆಲ್ಲಿಯೂ ಪ್ರಕಟವಾಗಿದೆಯೊ ? ಇಲ್ಲವೊ ? ಎಂದೂ ಅರಿಯೆ. ಉಳ್ಳಾಲದಲ್ಲಿ 'ಚೌಟ' ಎಂಬ ಜೈನ ಅರಸರು ಆಳು

ತ್ತಿದ್ದರೆಂದೂ, ಅವರು ಮೂಡಬಿದರೆಯ ಅರಸರೂ ಆಗಿದ್ದು ಅವರಿಗೆ ಅರಮನೆಗಳಿದ್ದುವೆಂದೂ ಶ್ರೀ ಕೈ. ವಾ. ಗಣಪತಿ ಐಗಳರ 'ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ'ದಲ್ಲಿ ಓದಿರುವಂತೆ ನೆನಪಿದೆ. ಉಳ್ಳಾಲದಲ್ಲಿ ಒಬ್ಬ ಪ್ರಖ್ಯಾತ ರಾಣಿ ಇದ್ದಳೆಂದೂ, ಆಕೆ ಪೋರ್ತುಗೀಸರನ್ನು ಸೋಲಿಸಿ ಓಡಿಸಿದ್ದಾಳೆ ಎಂದೂ ಸುಮಾರು ವರ್ಷಗಳ ಹಿಂದಣ Aloysius College Magazine ಎಂಬ ಪತ್ರಿಕೆಯಲ್ಲಿ Prof Varky ಯವರ ಲೇಖಗಳು ಬಂದಿದ್ದವು. ಅದನ್ನು ಓದಿರುತ್ತೇನೆ. ಅದರ ಪ್ರತಿಗಳು ಆ ಕಾಲೇಜಿನ ಲೈಬ್ರರಿಯಲ್ಲಿ ಸಿಕ್ಕಬಹುದೇನೋ ನೋಡಿರಿ. ಸೋಮೇಶ್ವರ ದೇವಾಲಯದ ಕೆರೆಯ ಕಲ್ಲುಗಳನ್ನು ಕುಂಪಣಿ ಸರಕಾರದವರು (ಕ್ರಿ.ಶ. ೧೮೫೮ರ ವರೆಗೆ ಅವರು ಇಲ್ಲಿ ರಾಜ್ಯಭಾರ ಮಾಡುತ್ತಿದ್ದರು) ಮಂಗಳೂರಿನಲ್ಲಿ ಪಾಂಡೇಶ್ವರದಲ್ಲೋ ಎಲ್ಲೋ ಕೊಂಡು ಹೋಗಿದ್ದರಂತೆ. ಬಹಳ ಚಿಕ್ಕಂದಿನಲ್ಲಿ ೭-೮ ವರ್ಷ ಪ್ರಾಯದಲ್ಲಿ ನಾನು ಒಮ್ಮೆ ಸೋಮೇಶ್ವರ ಜಾತ್ರೆಗೆ ಹೋಗಿ ನೋಡಿ ಬಂದಿದ್ದೆ.

ಇತಿ ನಮಸ್ಕಾರ

೭೩

**ಮಾಸ್ತಿ ವೆಂಕಟೇಶ ಅಯ್ಯಂಗಾರ್** (ಬೆಂಗಳೂರು) ೨-೮-೫೭

ಗೋವಿಂದ ಪೈ ಮಾಡುವ ನಮಸ್ಕಾರ.

ತಾವು ಅತ್ಯಂತ ಪ್ರೀತಿಪೂರ್ವಕವಾಗಿ ನನಗೆ ಕಳುಹಿಸಿರುವ ಈ ೨ ಪುಸ್ತಕಗಳು, (೧) ಕನ್ನಡ ಲೆಂಕ, (೨) ಸೋಮಶೇಖರನಾಯಕ ಮತ್ತು ಚಿಕವೀರರಾಜೇಂದ್ರ ಮೊನ್ನೆ ಇಲ್ಲಿಗೆ ಮುಟ್ಟಿ ಆ ಬಗ್ಗೆ ತಮಗೆ ಅತ್ಯಂತ ಕೃತಜ್ಞನಾಗಿರುತ್ತೇನೆ. ತಮ್ಮ ಭಾಷಣವನ್ನು ಮನಸ್ಸು ಹಿಗ್ಗುಹಿಗ್ಗುತ್ತ ಓದಿದೆ. ಅಂದಿನ ಆ ಹಿರಿಯ ಸಂದರ್ಭಕ್ಕೆ ಅದು ಯಥೋಚಿತವಾಗಿದೆ. ತಮ್ಮ ವಿಶಾಲವಾದ ಚಕ್ರದೃಷ್ಟಿಯಿಂದ ತಾವು ಅನೇಕ ವಿಷಯಗಳನ್ನು ಅದರಲ್ಲಿ ಸಮೀಕ್ಷಿಸಿರುವ ಹಾಗೂ ವಿಮರ್ಶಿಸಿರುವ ಬಗ್ಗೆ ತಮ್ಮನ್ನು ಅಭಿನಂದಿಸುತ್ತೇನೆ. 'ಸೋಮಶೇಖರನಾಯಕ' ಎಂಬ ತಮ್ಮ ಐತಿಹಾಸಿಕ ಕಾದಂಬರಿಯ ಮೊದಲನೆಯ ಮುದ್ರಣದ ಪ್ರತಿಯನ್ನು ತಾವು ಹಿಂದೇ ನನಗೆ ಕಳುಹಿಸಿಕೊಟ್ಟಿರುವಿರಿ, ಅದನ್ನು ಆಗಲೇ ಓದಿ ಆ ಕುರಿತು ತಮಗೆ ತಿಳಿಸಿರುವಂತೆ ನನ್ನ ನೆನಪು. ಆ ಪ್ರತಿ ಟಿ. ಆರ್. ಕಿರೇತಮ್ಮನ ಮಗಳೊಂದಿಗೆ ಇದೆ ಅದು ಆಕೆಗೆ ಬೇಕಂತೆ. ಅದಾಗಿ ತಾವು ಈ ಪ್ರತಿಯನ್ನು ನನಗೆ ಕಳುಹಿಸಿ ನನಗೊಂದು ಪ್ರತಿಯನ್ನು ದೊರಕಿಸಿಕೊಟ್ಟಂತಾಯಿತು. ಬಹಳ ಉಪಕಾರ.

ತಮ್ಮ ಮತ್ತೊಂದು ಪುಸ್ತಕ 'ಚಿಕವೀರ ರಾಜೇಂದ್ರ' ಸದ್ಯಕ್ಕೆ ನಾಳೆಯಿಂದ ನನಗೊಂದು ಬೇರೆ ಕೆಲಸದ ದೆಸೆಯಿಂದ ಮಂಗಳೂರಿಗೆ ಹೋಗಿ ಬರಬೇಕಾಗಿ, ಕೆಲದಿನಗಳಿಗೆ ಓದತಕ್ಕಂತೆ ಅವಕಾಶ ದೊರೆಯದು. ಅದೆಲ್ಲ ಮುಗಿದು ಇಲ್ಲಿಗೆ ಮರಳಿದ ಬಳಿಕ ತಾನೆ ನಾನದನ್ನು ಓದುವೆನೆಂದು ಸದ್ಯಕ್ಕೆ ಒತ್ತಟ್ಟಿಗಿಟ್ಟಿರುತ್ತೇನೆ. ಮುಖ್ಯ

ಕಾರಣವಿಷ್ಟೇ : ಅದರಲ್ಲಿ ಕಣ್ಣನ್ನು ಓಡಾಡಿಸಿದೆ, ಮನಸ್ಸಿಗೆ ಬಹಳ ಸವಿಕಂಡಿತು. ಆದಕಾರಣವೇ ಅದನ್ನು ನಿಧಾನವಾಗಿ ತಾನೆ ಓದಬೇಕೆಂದಿದ್ದೇನೆ. ಅದರ ಕಥಾ ವಸ್ತುವನ್ನು ಕುರಿತು ನನ್ನ ಮನಸ್ಸಿಗೆ ಹೀಗೆಂದು ಪೂರ್ವಕಥೆ ಇದೆ ; ನನ್ನ ೮-೯ನೆಯ ವರ್ಷದಲ್ಲಿ ಆ ಹಿಂದೆ ನನ್ನ ಬಗ್ಗೆ ಹೇಳಿಕೊಂಡಿದ್ದ ಯಾವೊಂದು ಹರಕೆಯನ್ನು ಸಲಾಯಿಸಲೆಂದು ೧೮೯೧ನೆಯ ಇಸವಿಯ ತುಲಾ ಸಂಕ್ರಾಂತಿಯ ಕಾವೇರಿ ಜಾತ್ರೆಗೆ ನನ್ನನ್ನು ತಲಕಾವೇರಿಗೆ ನನ್ನ ಹಿರಿಯರು ಕೊಂಡುಹೋಗಿದ್ದಾಗ ಅಲ್ಲಿಯೂ ಅದಕ್ಕಿಂತ ಹೆಚ್ಚಾಗಿ ಭಾಗಮಂಡಲದಲ್ಲಿ ಮತ್ತು ಮಡಿಕೇರಿಯಲ್ಲಿಯೂ ಇರುವ ದೇವಸ್ಥಾನಗಳ ಕದಗಳಲ್ಲೆಲ್ಲ ಇದ್ದ "ವಿ" ಮತ್ತು "ಲಿ" ಎಂಬ ಕನ್ನಡ ಅಕ್ಷರಗಳನ್ನು ಕಂಡು ನನಗೆ ಚೋದ್ಯವಾಗಿ, ಅವೇನೆಂದು ವಿಚಾರಿಸಿದಾಗ ನನಗೆ ಅಲ್ಲಲ್ಲಿದ್ದವರು ಕೊಡಗಿನ ಕೊನೆಯರಸರಾದ 'ಲಿಂಗರಾಜ' 'ವೀರರಾಜ' ಕಥೆಗಳನ್ನು ಹೇಳಿದ ನೆನಪು ಈಗಲೂ ಇದೆ. ಆ ಮೇಲೆ ಮಂಗಳೂರಿನ ಬಾಸೆಲ್ ಮಿಶನ್ ಬುಕ್ ಶಾಪಿನವರು (Basel Mission Book Depot, Mangalore) ಪ್ರಕಟಿಸಿದ ಕೊಡಗಿನ ವೃತ್ತಾಂತ (?) ಎಂಬ ಪುಸ್ತಕವನ್ನೂ ಆಗ್ಗೆಯೇ ೧೮೯೨-೧೮೯೩ರಲ್ಲಿ ಓದಿದ ನೆನಪೂ ಇದೆ. ಅದನ್ನೋದಿ ಆ ಗೌರಮ್ಮನನ್ನು ಇಂಗ್ಲೀಷು ಸರಕಾರ ಆಂಗ್ಲಾಳಕ್ಕೆ ಒಯ್ದು ಆಕೆಯನ್ನು ಕ್ರೈಸ್ತಳನ್ನಾಗಿ ಮತಾಂತರಿಸಿ, ಪಂಜಾಬಿನ ಅರಸನಾದ ರಣಜಿತ್‌ಸಿಂಗನು ಮಡಿಯುತ್ತಲೇ ಆಂಗ್ಲರು ಸಿಖ್ಖರೊಡನೆ ಎರಡು ಯುದ್ಧಗಳನ್ನು ಮಾಡಿ ಅವನ ಉತ್ತರಾಧಿಕಾರಿಯಾದ ಧುಲೀಪ (ದಿಲೀಪ) ಸಿಂಗನನ್ನು ಚಿಕ್ಕಂದಿನಲ್ಲೇ ಪಟ್ಟದಿಂದ ತಳ್ಳಿ (ಪಂಜಾಬನ್ನು ತಮ್ಮ ರಾಜಕ್ಕೆ ಕೂಡಿಸಿಕೊಂಡು) ಆತನನ್ನು ಆಂಗ್ಲಾಳಕ್ಕೆ ಕೊಂಡೊಯ್ದು ಕ್ರೈಸ್ತಧರ್ಮಕ್ಕೆ ಮತಾಂತರಿಸಿ ಅಲ್ಲಿ ಆಕೆಯನ್ನು ಆತನಿಗೆ ಮದುವೆಮಾಡಿಸಿದರೆಂದೂ ಆತನಿಗೆ ಹೊಟ್ಟೆಗೇನೂ ತಾರದೆ (?) ಆತನು ಹಸಿವೆಯಿಂದ ಫ್ರಾನ್ಸಿನ (France) Marscilles ನಲ್ಲೇನೋ ಒಬ್ಬ ಹೋಟೆಲುಗಾತಿಯ ಆರೈಕೆಯಲ್ಲಿ ಸತ್ತನೆಂದು ಆ ಬಳಿಕ ಆ ಗೌರಮ್ಮನು ಒಬ್ಬ ಆಂಗ್ಲನನ್ನೇನೋ ಮದುವೆಯಾದಳೆಂದೂ ಓದಿದ ನೆನಪಿದೆ. ಆ ಕಾರಣ ವೀರರಾಜನ ಹಾಗೂ ಅವನ ಮಗಳ ಕಥೆಯಲ್ಲಿ ನನಗೆ ತುಂಬ ಆದರವಿದೆ. ಅತಏವ ಅದನ್ನು ನಿಧಾನವಾಗಿ ಓದಬೇಕು. ಆ ಬಳಿಕ ಬರೆಯುವೆ.

ಪುನಃ ಪುನಃ ತಮ್ಮ ಉಪಕಾರವನ್ನು ಸ್ಮರಿಸುತ್ತೇನೆ. ತಮಗೂ ತಮ್ಮ ಗೃಹಿಣಿಯವರಿಗೂ ಪ್ರೀತ್ಯಭಿಮಾನ ಪುರಸ್ಸರವಾದ ನಮಸ್ಕಾರಗಳು.

ಟಿಪ್ಪಣಿ ; (೧) ಮಾಸ್ತಿಯವರಿಂದ–ಇದು ಹಿರಿಯರಾದ ಶ್ರೀ ಎಂ. ಗೋವಿಂದ ಪೈ ಆ ದಿನಗಳಲ್ಲಿ ಬರೆದ ಒಂದು ಪತ್ರ. "ಕನ್ನಡ ವೆಂಕ" ನಾನು ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಕೊಟ್ಟ Convocation Address. "ಸೋಮಶೇಖರನಾಯಕ" ಚೆನ್ನಬಸವನಾಯಕ ಎನ್ನುವುದನ್ನು ಶ್ರೀಯುತರು ಗ್ರಹಿಸಿದ ರೀತಿ.

(೨) ಮಾಸ್ತಿಯವರು ೨ ಪುಸ್ತಕಗಳನ್ನು ಕಳಿಸಿರುವುದಾಗಿ ಪೈಗಳು ಹೇಳಿದ್ದರೂ ಅವು ಮೂರು ಎಂದು ತೋರುತ್ತದೆ-'ಸೋಮಶೇಖರನಾಯಕ' ಇದು 'ಚೆನ್ನಬಸವನಾಯಕ' ಎಂದಾದರೆ. 'ಚಿಕವೀರರಾಜೇಂದ್ರ'ವು ಈ ಪತ್ರಕ್ಕೆ ಕೆಲವು ತಿಂಗಳ ಹಿಂದೆ ಮಾತ್ರ ಪ್ರಕಟವಾಗಿತ್ತು.



ಗೋವಿಂದ ಪೈ

೭೪

**ರಂ. ಶ್ರೀ. ಮುಗಳಿ** (ಸಾಂಗ್ಲಿ) ೯-೯-೫೭

ಗೋವಿಂದ ಪೈ ಮಾಡುವ ನಮಸ್ಕಾರ. ತಮ್ಮ ೩ನೆಯ ತಾರೀಕಿನ ಕಾರ್ಡು ವೊನ್ನೆ ಮುಟ್ಟಿ, ತಮ್ಮ ಅಪೇಕ್ಷೆಯ ಪ್ರಕಾರ ನಾನು 'ಗಿಳಿವಿಂಡಿನ' ಪ್ರತಿಯನ್ನು ಇವತ್ತು ರಿಜಿಸ್ಟರ್ಡ್ ಬುಕ್‌ಪೋಸ್ಟ್ ದ್ವಾರಾ ತಮಗೆ ಕಳುಹಿಸಿರುತ್ತೇನೆ. 'ಗಿಳಿ ವಿಂಡಿನ' ಪ್ರತಿಗಳು ಎಂದೋ ಮಾರಿಹೋಗಿವೆ. ಈಗ ಕೂಡ ಇರುವ ಕೊನೆಯ ಪ್ರತಿಯಾದ ಕಾರಣ, ತಾವು ಇದನ್ನು ಇದೇ ಸಪ್ಟಂಬರ್ ತಿಂಗಳ ಕೊನೆಯೊಳಗೆ ನನಗೆ ಮರಳಿ ರಿಜಿಸ್ಟರ್ಡ್ ಬುಕ್‌ಪೋಸ್ಟ್ ದ್ವಾರಾ ಇಲ್ಲಿಗೆ ಮುಟ್ಟಿಸಬೇಕೆಂದು ವಿನಂತಿಸುತ್ತೇನೆ. ಬಹಳ ಉಪಕಾರ. ಈ ಗಿಳಿವಿಂಡಿನಲ್ಲಿ ನನ್ನ ಹೆಚ್ಚು ಕಡಿಮೆ ೧೯೦೯ ರಿಂದ ೧೯೨೭-೧೯೨೯ ರಷ್ಟರ ವರೆಗಿನವೇನೋ ಮಾತ್ರ ಕವಿತೆಗಳಿವೆ.

ಮಹಾತ್ಮಾ ಗಾಂಧಿಯವರ ಕೊನೆಯ ದಿನವನ್ನು ಕುರಿತು ಕವನಿಸಬೇಕೆಂದಿದ್ದ ಆಲೋಚನೆಯನ್ನು ಕಾರಣಾಂತರದಿಂದ ಬಿಟ್ಟುಬಿಡಬೇಕಾಯಿತು. ಶ್ರೀಕೃಷ್ಣನ ಅವತಾರ ಸಮಾಪ್ತಿಯನ್ನು ಕುರಿತ ಕವಿತೆಯನ್ನು ಆತನೇ ನನ್ನಲ್ಲಿ ಒಲಿದು ಬರಸಿ ಕೊಂಡರೆ ಬರೆವೆ. ಇಲ್ಲವೆ, ಇಲ್ಲ. ಅವನನ್ನು ಕುರಿತು ಮಮತೆಯಿಂದ ತಾವು ಕೇಳಿರುವ ಪ್ರಶ್ನೆಗಾಗಿ ಧನ್ಯವಾದಗಳು.

ಇತಿ ನಮಸ್ಕಾರ

೭೫

**ಕ. ನು. ಶಿ. ಚಂದ್ರಶೇಖರಯ್ಯ** (ಬೈಲಹೊಂಗಲ) ೧೮-೧೦-೫೭

ಗೋವಿಂದ ಪೈ ಮಾಡುವ ನಮಸ್ಕಾರ. ತಾವು ಪ್ರೀತಿಪೂರ್ವಕವಾಗಿ ಕಳುಹಿಸಿ ರುವ "ಮಧುರಯಾನ" ಎಂಬ ತಮ್ಮ ಕವಿತೆಗಳ ಪುಸ್ತಕ ಇಲ್ಲಿಗೆ ಮುಟ್ಟಿ ಧನ್ಯವಾದ ಗಳು. ಓದಿ ನೋಡಿದೆ. ಕವಿತೆಗಳೆಲ್ಲ ಬಹಳ ಚೆನ್ನಾಗಿವೆ. ಅವಲ್ಲಿ ಈ ಕೆಲವು ನನ್ನ ಮನೋದೃಷ್ಟಿಗಂತೂ ಮಿಕ್ಕವಕ್ಕಿಂತ ಚಲೋದೆನಿಸುತ್ತವೆ. (1) ದೊಡ್ಡ ವರ ದಾರಿ, (2) ಮರುಕಳಿಸಿದ ನೆನಪು, (3) ಒಂದು ಸಂಜೆ, (4) ನೆರಳ ಸಂತೆ, (5) ಚಿತ್ರ ಚೆಲುವೆಗೆ, (6) ಇಹುದು ದೂರ – ಇನ್ನು ಪೂರ!, (7) ಸುಪ್ತ ಶಕ್ತಿ, (8) ನಿಜದ ನಡೆಗಾಗಿ, (9) ಅನಂತರ, (10) ಸೋತ ಮನ, (11) ದೀಪಾವಳಿ, (12) ಅವಳ ಕುಣಿತ, (13) ಹರಸುವೆನು, ಓ ಗೆಳೆಯೆ ! ಇ ಇ.

ಇವೆಲ್ಲವಲ್ಲಿ ಇರುವ ಈ ವೊದಲಾದ ಕೆಲವು ಮಾತುಗಳನ್ನು ಒಮ್ಮೆ ಓದಿದೆವೆಂದರೆ, ಮತ್ತೆ ಅವು ನೆನಪಿನಿಂದ ಜಗುಳಿ ಹೋಗುವಂತಿಲ್ಲ–(1) "ಮೌನಮಂಟಪದಲ್ಲಿ ಮನವು ಮಲಗಿರುವಾಗ" (ಪುಟ 4), (2) "ಬೆಳಕಿನ ಜನ್ಮಕ್ಕೆ ಕತ್ತಲೆ ಮೂಲವೊ" (6), (3) "ಹಲವು ನಾಮದ ದೇವರೊಬ್ಬನಂತೆ" (9), (4) "ಮಾತುಗಳಿಗೇ ನಂತೆ ? ಸುಂಕವಂತೂ ಇಲ್ಲ" (13), (5) "ಎಣ್ಣೆಯೆ ಇಲ್ಲದ ಕಡುಬಡವನ ಮನೆ ಯಲಿ ಕಗ್ಗತ್ತಲೆ ದೀಪ" (45) (ಬಹಳ ಚಲೋದಿದೆ ಈ ರೂಪಕೋಕ್ತಿ !)

(6) . "ಅಣುಬಾಂಬು ಹರಿಯ ಹನ್ನೊಂದನೆಯ ಅವತಾರ" (ಪುಟ 47), (7) "ಹೆದರಿಕೆಗೆ ಸೆರೆಯಾಗಬೇಡ" (49) , (8)"ದುಷ್ಟಶಕ್ತಿಗಿಂದು ವಿಜಯ !" (80) ಇ ಇ.

ಆದರೆ ಈ ಕವನ ಸಂಗ್ರಹದ ಅಕ್ಷರಿಕೆಯಲ್ಲಿ ಬೇಕಾದಷ್ಟು ಎಡಹುಗಳಿವೆ. ಉದಾ: "ತತ್ತ್ವ" ಎಂದು ಕೊನೆಯ ಎರಡನೆಯ ತ್ರ್ಯಕ್ಷರದಲ್ಲಿ 2 ತಕಾರಗಳು ಇರಬೇಕಾದ ಶಬ್ದದಲ್ಲಿ ತುದಿಯಿಂದ ತುದಿವರೆಗೆ ಒಂದೇ ತಕಾರವಿದೆ. "ಆವ ಯಕ್ಷನ" (ಪುಟ 8) ಎಂದಿರಬೇಕಾದಲ್ಲಿ "ಅವಯಕ್ಷನ" ಎಂದಿದೆ : (ಪುಟ 16) : "ಇಹದ ಕಷ್ಟಗಳನ್ನು ಮರೆಸಿ" ಇಲ್ಲಿ"ನು" ಎಂದಿರಬೇಕಾದಲ್ಲಿ "ನ್ನು" ಎಂದು ಒತ್ತಕ್ಷರ ; (ಪುಟ 27) "ಇದಮಿತ್ಥಂ" ಎಂದಿರಬೇಕಾದಲ್ಲಿ "ಇದಮಿಥ್ಥಂ" ; ಇ, ಇ. ಇಂಥ ದೋಷಗಳು ಇರಲಾಗದು; (ಪುಟ 55), "ಹಸುಗಳಿನಸಿನ" "ಹಸುಳೆಗನಸಿನ" ಎಂದಿರಬೇಕಾದಲ್ಲಿ, ಇದು ಅಚ್ಚಿನ ದೋಷವೆಂದು ಸ್ಪಷ್ಟವಿದೆ. ಇಷ್ಟು ಚಲೋಕವಿತೆಗಳನ್ನು ರಚಿಸಿರುವ ಬಗ್ಗೆ ತಮ್ಮನ್ನು ಅಭಿನಂದಿಸುತ್ತೇನೆ. ಇದಕ್ಕಿಂತ ಮೇಲು ಮೇಲಾದ ಕವಿತೆಗಳನ್ನು ತಾವು ಮುಂದೆ ರಚಿಸುತ್ತ, ಕನ್ನಡ ಕವಿತಾ ಸಾಹಿತ್ಯದಲ್ಲಿ ತಾವು ಹೆಸರುವಾಸಿಯಾಗುವಂತೆ ಶ್ರೀ ಪರಮಾತ್ಮನು ತಮ್ಮಲ್ಲಿ ದಯೆದೋರಲಿ ಎಂದು ಆತನಲ್ಲಿ ಪ್ರಾರ್ಥಿಸುತ್ತೇನೆ.

ಇತಿ ಶಮ್ ಇತಿ ನಮಸ್ಕಾರ

P. S. ತಮ್ಮ 14ನೆಯ ತಾರೀಕಿನ ಕಾರ್ಡು ಕೂಡಾ ಪುಸ್ತಕದೊಂದಿಗೇನೇ ಕೈ ಸೇರಿ ಆ ಬಗ್ಗೂ ಧನ್ಯವಾದಗಳು.

P S. ಒಂದು ಮಾತನ್ನು ಮೇಲಣ ಪ್ರತ್ಯುತ್ತರದಲ್ಲಿ ಸೇರಿಸಬೇಕೆಂದಿದ್ದೆ. ಮರೆತು ಹೋಯಿತು.

ಅದು ಹೀಗಿದೆ–ತಮ್ಮ ಪುಸ್ತಕದ 35ನೆಯ ಪುಟದಲ್ಲಿ "ನೀರಿನಲ್ಲಿ ನೆನೆದಿರುವ ಬೇಕಿ ಪೊಟ್ಟಣದಂತೆ !" ಎಂದೂ " ನೆನೆದಿರುವ ಪೊಟ್ಟಣವು ಬಿಸಿಲಿನಲ್ಲಿ ಒಣಗಿದರೆ ಸುಡುವ ಶಕ್ತಿಯನೆಲ್ಲಿ ಗಳಿಸುವುದು?" ಎಂದೂ ಇದೆ. ಇದು ಅಪ್ಪಟ ಇತ್ತೀವಂದಿನ ರೂಪಕೋಕ್ತಿ. ನಮ್ಮ ಹಳೆಯ ಕವಿಗಳು ಸರ್ವಥಾ ಮನವರಿಸಿಲ್ಲದ ರೂಪಕಾಲಂಕಾರವಿದು ಎಂದು ಸ್ವಯಂ ವ್ಯಕ್ತವಿದೆ. ನಮ್ಮಂದಿನವರೂ ನಾನು ಬಲ್ಲಷ್ಟುರವರೆಗಾದರೂ ಯಾರೂ ಈವರೆಗೆ ಬಳಸಿಲ್ಲದ ರೂಪಕೋಕ್ತಿ. ಬಹಳ ಚಲೋದಾದ, ಅಗ್ಗಳೆಯದೆನಿಸುವ ರೂಪಕೋಕ್ತಿ. ತಮ್ಮನ್ನು ಈ ಬಗ್ಗೆ ತುಂಬಾ ಅಭಿನಂದಿಸುತ್ತೇನೆ. ಶ್ರೀದೇವರು ತಮಗೆ ದೀರ್ಘಾಯುರಾರೋಗ್ಯವಿತ್ತು ತಮ್ಮಿಂದ ಕನ್ನಡ ಕಾವ್ಯ ಸಾಹಿತ್ಯದಲ್ಲಿ ಅತ್ಯುತ್ತಮವಾದ ಕೆಲಸವನ್ನು ಮಾಡಿಸಿಕೊಳ್ಳಲಿ ಎಂದು ಆತನಲ್ಲಿ ಮನಸಾರೆ ಪ್ರಾರ್ಥಿಸುತ್ತೇನೆ.

ಇತಿ ನಮಸ್ಕಾರ

**೭೬**

**ಮುನಿಪಾಲ ರಾಜು** (ಮಂಗಳೂರು) ೨೦–೨–೫೮

ಗೋವಿಂದ ಪೈ ಮಾಡುವ ನಮಸ್ಕಾರ. ನಿಮ್ಮ ನಿನ್ನೆಯ ತಾರೀಕಿನ ಕಾರ್ಡು

ಇವತ್ತು ಈಗ ಸಂಜೆ ಕೈ ಸೇರಿ ಆ ಬಗ್ಗೆ ಧನ್ಯವಾದಗಳು. ನಾನು ೧೮೮೩ನೆಯ ಇಸವಿಯ ಮಾರ್ಚ್ ತಿಂಗಳ ೨೩ನೆಯ ತಾರೀಕಿಗೆ ಹೋಳೀ ಹುಣ್ಣಿಮೆಯ ದಿನ ಹುಟ್ಟಿದೆ. ತಾರೀಕಿನ ಲೆಕ್ಕದಲ್ಲಿ ಬರುವ ಮಾರ್ಚ್ ತಿಂಗಳ ೨೩ನೆಯ ತಾರೀಕಿಗೆ ೭೫ ವರ್ಷಗಳು ಮುಗಿಯುತ್ತವೆ. ಸಾಯಲಿಕ್ಕೆ ಹತ್ತಿರ ಹತ್ತಿರವಾಯಿತು. ನನಗೇನೂ ಅಭಿನಂದನೆಗಳನ್ನೇ ವಗೈರೆ ಮಾಡಬೇಕೆಂದಿಲ್ಲ, ಮಾಡಬಾರದು. ಆ ತಕ್ಕ ಪ್ರೀತಿ ನಮ್ಮ ನಮ್ಮ ಮನಸ್ಸಿನಲ್ಲಿ ಇದ್ದರೆ ಅದೇ ಹೆಚ್ಚು.-ಏಕೆಂದರೆ ಸರ್ವಾಂ. ತರ್ಯಾಮಿಯಾದ ಶ್ರೀ ದೇವರು ನಮ್ಮ ಮನಸ್ಸನ್ನು ನೋಡುವನೇ ವಿನಾ ಹೊರಗೆ ಸೂಸುವ ಮಾತುಗಳನ್ನಲ್ಲ. ದೇವರು ನಿಮಗೂ ನಿಮ್ಮವರೆಲ್ಲರಿಗೂ ದೀರ್ಘಾಯುರಾರೋಗ್ಯವನ್ನಿತ್ತು, ಉತ್ತರೋತ್ತರ ಅಭಿವೃದ್ಧಿ ಮಾಡಿ ಕಾಪಾಡು ತ್ತಿರಲಿ ಎಂದು ಪ್ರಾರ್ಥಿಸುತ್ತೇನೆ.

ಇತಿ ನಮಸ್ಕಾರ

೭೭

**ದು. ನಿಂ ಬೆಳಗಲಿ** (ಬನಹಟ್ಟಿ) ೨೭-೨-೫೮

ಗೋವಿಂದ ಪೈ ಮಾಡುವ ನಮಸ್ಕಾರ. ತಮ್ಮ ೧೧ನೆಯ ತಾರೀಕಿನ ಕಾರ್ಡು ಅದರೊಂದಿಗೆ ತಾವು ಪ್ರೀತಿಪೂರ್ವಕವಾಗಿ ಕಳುಹಿಸಿದ "ಬೆನ್ನು (ಬೆನ್ನ ?) ಹಿಂದಿನ ಕಣ್ಣು" ಎಂಬ ಕಥಾ ಸಂಗ್ರಹದ ಪುಸ್ತಕವೂ ಇಲ್ಲಿಗೆ ಮುಟ್ಟಿ ಧನ್ಯವಾದಗಳು. ಓದಿ ನೋಡಿದೆ, ಕಥೆಗಳೆಲ್ಲ ಬಲು ಸೊಗಸಾಗಿವೆ. ತಮ್ಮನ್ನು ಮನವಾರೆ ಅಭಿ ನಂದಿಸುತ್ತೇನೆ. ಇದಕ್ಕಿಂತ ಹೆಚ್ಚಾಗಿ ಅಂದರೆ ಆಯಾ ಕಥೆಯನ್ನೇ ಕುರಿತು ಬೇರೆಬೇರೆಯಾಗಿ ಎಸಳೆಸಳಾಗಿ ಬರೆವೆನೆಂದರೆ ಇತ್ತೀಚೆಯ ಅನಾರೋಗ್ಯ ಹಾಗೂ ಅದರಿಂದ ಉಂಟಾಗಿರುವ ಅಶಕ್ತಿಯ ಕಾರಣ ಮನಸ್ಸಿಗೆ ಹಾಗೆ ಬರೆಯುತಕ್ಕಷ್ಟರ ತಾಳ್ಮೆಯೂ ಇಲ್ಲ. ಬರೆಯುಬೇಕೆಂದುಳ್ಳ ಇಷ್ಟದೊಡನೆ ಮನಸ್ಸು ಜೊತೆ ಗೂಡಲೂ ಒಲ್ಲ. ಹಾಗಾಗಿ ಆ ಕೆಲಸ ತೀರ ಅಸಾಧ್ಯವಾಗಿದೆ. ದಯೆಮಾಡಿ ಕ್ಷಮಿಸುವುದು. ತಾವು ಇನ್ನು ಮುಂದೆ ಇದಕ್ಕಿಂತ ಮೇಲು ಮೇಲಾದ ಕಥೆಗಳನ್ನು, ಕಾದಂಬರಿಗಳನ್ನು ಬರೆಯುತ್ತಾ ಕನ್ನಡ ಸಾಹಿತ್ಯದಲ್ಲಿ ಹೆಸರು ಪಡೆದು ದೀರ್ಘಾಯುರಾರೋಗ್ಯಶಾಲಿಗಳಾಗಿ ಬಾಳುತ್ತಿರುವಂತೆ ಶ್ರೀ ದೇವರು ತಮ್ಮನ್ನು ಕಾಪಾಡಲಿ ಎಂದು ಆತನನ್ನು ಪ್ರಾರ್ಥಿಸುತ್ತೇನೆ.

೭೮

**ಉಗ್ರಾಣ ಮಂಗೇಶರಾವ** (ಪುತ್ತೂರು) ೧೧-೪-೫೮

My Dear Sri Mangesh Rao,

I have agreed to comply with the request of dear Sri M. Ekambara Rao when we met here the other day to take some part in the 'Library Conference' to be held in Mangalore

from the 3rd to the 8th of the next month of May. In that connection I am writing this to trouble you with an earnest request to kindly let me know, as early as you conveniently can, when and where the palm-leaf Mss of the ಭರತೇಶ ವೈಭವ was found which you have so ably edited and oblige. I am sorry that my copy of the 1st part, which contained your introduction in which you must have told it, is missing, while the next parts are intact here! Thanking you for the very kind favour, and with cordial regards,

I am,

Very sincerely yours

ಟಿಪ್ಪಣಿ : ಕ್ರಿ.ಶ. ೧೯೫೮ರಲ್ಲಿ ನಡೆದ ಈ ಲೈಬ್ರರಿ ಸಮ್ಮೇಳನಕ್ಕೆ ಪೈಯವರು ಹೋದಂತಿಲ್ಲ. ಅದರ ನಿಮಿತ್ತವಾಗಿ ಲೇಖ/ಪ್ರಬಂಧವನ್ನು ಬರೆದ ಉಲ್ಲೇಖ ದೊರೆತಿಲ್ಲ.

೭೯

**ಎನ್. ಎ. ಶೀನಪ್ಪ ಹೆಗ್ಗಡೆ** (ಮಂಗಳೂರು) ೧೧–೬–೫೮

ಕೆಲವು ವರ್ಷಗಳ ಹಿಂದೆ ತುಳುವ ಜಾತಿಯವರನ್ನೂ, ಅವರ ಭೂತಾರಾಧನೆಯನ್ನೂ ಕುರಿತು ನೀವು ಒಂದು ಕೈ ಹೊತ್ತಗೆಯನ್ನು (hand book) ಬರೆದಿದ್ದೀರಲ್ಲ ? ನೀವೂ ಕೈ. ವಾ. ಶ್ರೀ ಕಿಲ್ಲೆಯವರೂ ಕೂಡಾ ಬರೆದಿದ್ದಿರಿ. ಅದಕ್ಕೆ ಮುನ್ನುಡಿಯನ್ನು ನಾನು ಬರೆದಿದ್ದೆ. ನಿಮಗೆ ನೆನಪಿರಬಹುದು. ಒಂದು ಪ್ರತಿಯನ್ನು ನೀವು ನನಗೆ ಕಳುಹಿಸಿಕೊಟ್ಟಿದ್ದೀರಿ. ಅದೀಗ ಎಷ್ಟು ಹುಡುಕಾಡಿದರೂ ಸಿಗಲಿಲ್ಲ. ನನ್ನ ತಮ್ಮ ಚಿ॥ ಸುಬ್ರಾಯನು ಅದನ್ನು ನೋಡಬೇಕಂತೆ. ಹೀಗಾಗಿ ನಿಮ್ಮೊಡನೆ ಒಂದು ಹೆಚ್ಚಿಗೆ ಪ್ರತಿ ಇದ್ದರೆ ದಯಮಾಡಿ ನನಗೆ ಕಳುಹಿಸಿಕೊಡುವ ಉಪಕಾರ ಮಾಡಬೇಕಾಗಿ ಅಪೇಕ್ಷಿಸಿ ಈ ಕಾರ್ಡನ್ನು ಜರೂರಾಗಿ ಬರೆದಿರುತ್ತೇನೆ. ಅನೇಕ ಧನ್ಯವಾದಗಳು. ಶ್ರೀದೇವರು ನಿಮಗೂ, ನಿಮ್ಮವರೆಲ್ಲರಿಗೂ ದೀರ್ಘಾಯುರಾರೋಗ್ಯವೇ ಮೊದಲಾದ ಲಾಭಗಳನ್ನಿತ್ತು ಕಾಪಾಡುತ್ತಿರಲಿ, ಎಂದೂ ಪ್ರಾರ್ಥಿಸುತ್ತೇನೆ. ತೊಂದರೆ ಕೊಡಬೇಕಾದ ಬಗ್ಗೆ ಕ್ಷಮಿಸಬೇಕಾಗಿ ವಿನಂತಿಸುತ್ತೇನೆ.

ಇತಿ ನಮಸ್ಕಾರ

೮೦

**ಎನ್. ಎ. ಶೀನಪ್ಪ ಹೆಗ್ಗಡೆ** (ಮಂಗಳೂರು) ೧೬–೬–೫೮

ತಮ್ಮ 14ನೆಯ ತಾರೀಕಿನ ಕಾರ್ಡು ಇವತ್ತು ಇಲ್ಲಿಗೆ ಮುಟ್ಟಿತು. ನನ್ನ ತಮ್ಮ ಚಿ॥ ಸುಬ್ರಾಯ ಪೈ ಮತ್ತು ಅವನ ಮಕ್ಕಳು ಈಗ ಕೋರ್ಟು ಗುಡ್ಡದಲ್ಲಿನ ಮನೆಯಲ್ಲಿಲ್ಲ. ಮೊನ್ನೆ ಮೇ ಒಂದನೆಯ ತಾರೀಕಿಗೆ ಅದನ್ನು ಬಿಟ್ಟು ಈಗ ಕಾರ್ನಾಡು ಸದಾಶಿವರಾವ್ ರಸ್ತೆಯಲ್ಲಿ "ಪ್ರಭಾತ್ ಟಾಕೀಸ್"ನ ಎದುರು ಮನೆಯಲ್ಲಿದ್ದಾರೆ.

ಅಲ್ಲಿ ತಾವು ತಮ್ಮ ಪುಸ್ತಕವನ್ನು ಕೊಟ್ಟರೆ ಬಹಳ ಉಪಕಾರ. ಅಲ್ಲಿ ಕೊಡುತ್ತಲೇ ನನಗೆ ಬರೆದು ತಿಳಿಸಬೇಕಾಗಿ ಅಪೇಕ್ಷಿಸುತ್ತೇನೆ. ಉಪಕಾರ. ಕೆಲದಿನಗಳ ಹಿಂದೆ ಇಲ್ಲಿಗೆ ಬಂದಿದ್ದ ನನ್ನ ತಮ್ಮ ಚಿ॥ ಸುಬ್ರಾಯ ಪೈ ನಿನ್ನೆ ಮಂಗಳೂರಿಗೆ ಹೊರಟು ಹೋಗಿರುತ್ತಾನಷ್ಟೆ.

ಅಹುದು. ಮಂಗಳೂರಿನ ಬಾಸೆಲ್ ಮಿಶನಿನವರು ಅಚ್ಚು ಹಾಕಿಸಿದ "ತುಳು ಪಾಡ್ದನೊಳು" ಎಂಬ ಪುಸ್ತಕದ ಪ್ರತಿ ನನ್ನೊಂದಿಗೆ ಇದೆ. ಅದು ಹೋದರೆ ಮತ್ತೆ ಬೇರೆಪ್ರತಿ ದೊರಕುವಂತೆ ಇಲ್ಲದುದರಿಂದ ಬಹಳ ಜೋಕೆಯಿಂದ ಇಟ್ಟು ಕೊಂಡಿರುತ್ತೇನೆ. ನಿಮಗೆ ಅಷ್ಟು ಅಗತ್ಯವೆಂದಾದರೆ ಕೆಲದಿನಗಳಿಗೆ ಎರವಲಾಗಿ ಕೊಡಬಹುದು. ಈಗಿನ ಸುರಿಮಳೆಯ ದಿನಗಳು – ಕಳೆಯುತ್ತಲೆ ಜುಲಾಯಿ ತಿಂಗಳಲ್ಲಿ ನನಗೆ ತಮ್ಮ ಬರೋಣದ ದಿನವನ್ನು ಮುಂದಾಗಿ ತಿಳಿಸಿ ಬನ್ನಿರಿ. ಏಕೆಂದರೆ ತಾವು ಇಲ್ಲಿಗೆ ಬರುವ ದಿನ ಗೊತ್ತಿಲ್ಲದೆ ಅವತ್ತು ನಾನು ಮಂಗಳೂರಿಗೆ ಹೊರಟು ಹೋಗಿದ್ದರೆ ?

ಅದರಲ್ಲಿ ಎಲ್ಲಾ ಭೂತಗಳ ಪಾಡ್ದನಗಳು ಇಲ್ಲ. ಕೆಲವೇ ಭೂತಗಳ ಪಾಡ್ದನ ಗಳು ಇವೆ. ಅವುಗಳ ಪಾಠಗಳಲ್ಲಿ ಕೂಡ ಅಲ್ಲಲ್ಲಿ ವ್ಯತ್ಯಾಸವಿದೆ.

ಇತಿ ನಮಸ್ಕಾರ

೮೧

**ಬಿ. ಟಿ. ರಂಗಸ್ವಾಮಿ** (ಬೆಂಗಳೂರು) ೧೩-೮-೫೮

ಗೋವಿಂದ ಪೈ ಮಾಡುವ ನಮಸ್ಕಾರಗಳು. ತಮ್ಮ ೧೧ನೆಯ ತಾರೀಕಿನ ಪತ್ರವೂ ಅದರೊಂದಿಗೆ ಇರಿಸಿ ಕಳುಹಿಸಿದ ಮೂರು (೩) ಅಂಚೆಯ ಚೀಟಿಗಳೂ (10+2 +2) ಇವತ್ತು ಮುಟ್ಟಿದುವು.

ತಾವು ರಚಿಸಿದ ಹಾಡುಗಳನ್ನು ನೋಡಿದೆ. ತಕ್ಕಷ್ಟು ಚನ್ನಾಗಿವೆ. ಪ್ರಥಮ ಪ್ರಯತ್ನವಾದರೆ ಒಳ್ಳೆಯದೇ ಸರಿ. ತಮ್ಮನ್ನು ಅಭಿನಂದಿಸುತ್ತೇನೆ. ಬೊಗಳಿ ಬೊಗಳಿ ರಾಗ (ಗಾಯನ ಕಲೆ) ಎಂದು ಹೇಗೋ ಹಾಗೆಯೇ ಬರೆದು ಬರೆದು (ಹಾಗೂ ಹರಿದೂ ಹರಿದೂ) ಕವನ ಎಂದು ಕೂಡಾ. ಹೀಗೇ ಬರೆಯುತ್ತಾ ಹೋಗಿ. ಮನಸ್ಸಿಗೆ ಒಪ್ಪದ್ದನ್ನು ಅಲ್ಲಿಗೇ ಹರಿದು ಹಾಕಿ ಮುಂದುವರಿಸುತ್ತಿದ್ದರೆ ಮುಂದೆ ಒಳ್ಳೆಯ ಕವಿಗಳಾಗುವಿರಿ. ಶ್ರೀ ದೇವರು ತಮ್ಮಲ್ಲಿ ಹಾಗೇ ಅನುಗ್ರಹಿಸಲಿ.

ಇತಿ ನಮಸ್ಕಾರ

Enclosures : (೧) ತಮ್ಮ ಪತ್ರ–ಅದರಲ್ಲಿರುವ ಆ ನಾಲ್ಕು ಹಾಡುಗಳನ್ನು ನಾನು ಬಲ್ಲಷ್ಟರ ಮಟ್ಟಿಗೆ ತಿದ್ದಿರುತ್ತೇನೆ. (೨) ತಾವು ಕಳುಹಿಸಿರುವ ೩ ಅಂಚೆಯ ಚೀಟಿಗಳು.

## ಬೈಕಾಡಿ ವೆಂಕಟಕೃಷ್ಣರಾಯ (ಬ್ರಹ್ಮಾವರ) ೨೪-೯-೫೮

ಗೋವಿಂದ ಪೈ ಮಾಡುವ ನಮಸ್ಕಾರ. ಕ್ಷೇಮ. ತಮ್ಮ 22ನೆಯ ತಾರೀಕಿನ ಪತ್ರ ಮುಟ್ಟಿ ಆ ಬಗ್ಗೆ ಧನ್ಯವಾದಗಳು. ನನಗೀಗ ಕೆಲಕಾಲ ನಡೆಯಲಿಕ್ಕೆ ಕಾಲೆತ್ತುವುದೇ ಉಬ್ಬಸ ಬಂದಂತಾಗಿ ಏದಬೇಕಾಗುತ್ತದೆ. ಅದಾಗಿ ನಾನು ಆಗಾಗ ಮಂಗಳೂರಿಗೆ ಹೋಗಿ ಬರುತ್ತಿದ್ದ ಪ್ರಯಾಣಗಳನ್ನೆಲ್ಲ ತೀರ ನಿಲ್ಲಿಸಿರುವೆನಷ್ಟೇ ಅಲ್ಲ, ಇಲ್ಲಿಯೆ ಊರಲ್ಲಿ ಕೂಡ ಈಗೀಗ ಮನೆಬಿಟ್ಟು ಹೊರಗೆ ಹೋಗುತ್ತಿಲ್ಲ. ಮನೆಯಲ್ಲೇ ಇದ್ದು ವಿಶ್ರಾಂತಿ ತಗೊಳ್ಳುತ್ತಿದ್ದರೆ ಶ್ರೀ ದೇವರ ದಯೆಯಿಂದ ಈ ಅನಾರೋಗ್ಯವೂ ಕ್ರಮಶಃ ವಾಸಿಯಾದೀತೆಂದಿರುವ ಡಾಕ್ತರರ ಹೇಳಿಕೆಯ ಪ್ರಕಾರ ಮನೆಯಿಂದ ಹೊರಗೆ ಹೋಗದೆ ಇದ್ದೇನೆ.

ಈ ಕಾರಣ ತಾವು ಅತ್ಯಂತ ಪ್ರೀತಿಪುರಸ್ಸರವಾಗಿ ನೀಡಿರುವ ಆಮಂತ್ರಣವನ್ನು ತಲೆ ಬಾಗಿ ಕೂಡಲೇ ಕೆಯ್ಕೊಳ್ಳಲಾರದ ಬಗ್ಗೆ ನನ್ನನ್ನು ದಯಮಾಡಿ ಕ್ಷಮಿಸಬೇಕಾಗಿ ಪ್ರಾರ್ಥಿಸುತ್ತೇನೆ. ಬಹಳೇ ಉಪಕಾರ.

ತಮ್ಮ ಪತ್ರದಲ್ಲಿ ತಾವು ಕೊಂಚ ಮುಂದೆ ಬರೆದಿರುವ ಈ ಮಾತುಗಳಾದರೆ ಆಶಾದಾಯಕವಾಗಿವೆ–"ನಾಡ ಹಬ್ಬಕ್ಕೆ ತಾವು ಬಂದರೆ ನಮಗೆ ತುಂಬಾ ಆನಂದವಾಗುವುದು. ಇಲ್ಲವಾದರೆ ತಮಗೆ ಅನುಕೂಲವಾದ ಒಂದು ದಿನ ಎಂದಾದರೂ ಅಡ್ಡಿಯಿಲ್ಲ, ತಾವು ತಿಳಿಸಬೇಕು...ಅಂತೂ ತಾವು ಬ್ರಹ್ಮಾವರಕ್ಕೆ ಒಮ್ಮೆ ಬರಲೇಬೇಕು." ಈ ತಮ್ಮ ಪ್ರೀತಿಪೂರ್ವಕವಾದ ಮಾತುಗಳಿಗೆ ಪ್ರತ್ಯುತ್ತರವಾಗಿ ಶ್ರೀ ದೇವರಲ್ಲಿ ಸರ್ವಭಾರವಿಕ್ಕಿ ಹೇಳುವುದೇನೆಂದರೆ, ಆತನು ನನ್ನನ್ನು ಈ ಅಸೌಖ್ಯದಿಂದ ಮೇಲೆತ್ತಿ ಉಳಗೊಡಿಸಿದರೆ, ಕೊಂಚ ಕ್ಷೇಮದೋರುತ್ತಲೆ ನಾನು ಬಂದೇ ಬರುವೆ; ಒಂದು ದಿನಕ್ಕಾದರೂ ಬಂದುಹೋಗುವೆ ಎಂದು. ಶ್ರೀ ದೇವರು ಹಾಗೆ ನಡೆಸಲಿ! ಈ ಒಮ್ಮೆ ಹೇಗೂ ನನ್ನನ್ನು ದಯಮಾಡಿ ಕ್ಷಮಿಸಿರಿ.

ಮತ್ತೊಂದು ಮಾತು. ಕಳೆದ 1950ನೆಯ ಇಸವಿಯಲ್ಲಿ ನನ್ನನ್ನು ಮೈಸೂರು ಬೆಂಗಳೂರು ಹಾಗೂ ಕೆಲಕೆಲವು ಊರುಗಳಿಗೆ ಕರೆಸಿಕೊಂಡಾಗ ಅಲ್ಲಿ ಹೋದ ಹೋದಲ್ಲೆಲ್ಲ ಕೊಟ್ಟ ಮಾನಪತ್ರಗಳೂ ಇಲ್ಲಿಯೇ ಮಂಗಳೂರು ಮುಂತಾದ ಊರುಗಳಲ್ಲಿ ಕೊಟ್ಟ ಮಿಕ್ಕವೂ ನಮ್ಮ ಮನೆಯಲ್ಲೆಲ್ಲ ಗೋಡೆ ಗೋಡೆಗಳಲ್ಲೆಲ್ಲ ತೂಗುತ್ತವೆ. ಇನ್ನು ತೂಗಿಸುವೆನೆಂದರೆ ಎಡೆ ಇಲ್ಲ! ಆದಕಾರಣವೇ ಅಲ್ಲ. ಮಾನಪತ್ರ ಎಂಬ ಹಳೆಯ ಉಪಚಾರವನ್ನು ತೀರ ವಿಸರ್ಜಿಸಿ, ಆ ಬಗ್ಗೆ ನನಗೆ ತಾವು ದೃಢವಾದ ನಂಬುಗೆಯನ್ನು ಮುಂದಾಗಿ ಇತ್ತಲ್ಲದೆ ತಮ್ಮ ಕಡೆಗೆ ಹೊರಡುವರೆ ನನ್ನ ಮನಸ್ಸು ಸರ್ವಥಾ ಒಪ್ಪದು. ದಯಮಾಡಿ ನನ್ನ ಇದೊಂದು ವಿನಂತಿಯನ್ನು

ಮರೆಯಲಾಗದು. ನಡೆಸಲೇಬೇಕು ಎಂದು ಪದೇ ಪದೇ ವಿನಂತಿಸುತ್ತೇನೆ. ಬಹಳ ಉಪಕಾರ.

ಮುಂದಣ ತಿಂಗಳಲ್ಲಿ ತಮ್ಮಲ್ಲಿ ಜರಗಲಿಕ್ಕಿರುವ ಈವಂದಿನ ನಾಡಹಬ್ಬವು ತುಂಬ ಯಶಸ್ವಿಯಾಗಿ ನೆರವೇರುವಂತೆಯೂ ತಮ್ಮಲ್ಲಿಯ ಕರ್ನಾಟಕ ಸಂಘವು ಚಿರಕಾಲ ಬಾಳುತ್ತಿರುವಂತೆಯೂ ಶ್ರೀ ದೇವರು ಅನುಗ್ರಹಿಸಲಿ ಎಂದು ಆತನಲ್ಲಿ ಪ್ರಾರ್ಥಿಸುತ್ತೇನೆ.

ಇತಿ ನಮಸ್ಕಾರ

ಲಕ್ಷಿ

**ವಿ. ಎ. ಶೆಣಾಯಿ** (ಮುಂಬಯಿ) ೨೬-೧೦-೫೮

ಗೋವಿಂದ ಪೈ ಮಾಡುವ ನಮಸ್ಕಾರ, ಶ್ರೀ ರವೀಂದ್ರರ "ಗೀತಾಂಜಲಿ"ಯು ಇಂಗ್ಲೀಷ್ ಭಾಷಾಂತರಕ್ಕೆ ತಾವು ಮಾಡಿರುವ ಕನ್ನಡ ಭಾಷಾಂತರದ ತಮ್ಮ ಹಸ್ತ ಪ್ರತಿಯೂ, ಅದರೊಂದಿಗೆ ಕಳುಹಿಸಿದ ತಮ್ಮ ಈ ತಿಂಗಳ 11ನೆಯ ತಾರೀಕಿನ ಪತ್ರವೂ ಇಲ್ಲಿಗೆ ಮುಟ್ಟಿ ಆ ಬಗ್ಗೆ ತಮಗೆ ಧನ್ಯವಾದಗಳು.

ಆದರೆ ನನ್ನ ದುರದೃಷ್ಟದಿಂದ ಒಂದು ಕಡೆ ನನಗೀಗ ಇಳಿವಯಸ್ಸು, ಮತ್ತೊಂದು ಕಡೆ ಅದರಿಂದಾಗತಕ್ಕ ಅಶಕ್ತಿ ಹಾಗೂ ಇತ್ತೀಚೆಗೆ ಆಗಿದ್ದ ಅಸೌಖ್ಯದಿಂದ ಉಂಟಾಗಿರುವ ಅಶಕ್ತಿ, ಇವುಗಳಿಂದಾಗಿ ನನ್ನಿಂದ ಈಗ ಯಾವ ಕೆಲಸವನ್ನೂ ಮಾಡಕೊಡುವುದಿಲ್ಲ. ಹೆಚ್ಚೇಕೆ? ತಮ್ಮ ಭಾಷಾಂತರವನ್ನು ಒಮ್ಮೆ ಆದ್ಯಂತವಾಗಿ ಓದಿ ನೋಡುವಷ್ಟರ ತಾಳ್ಮೆ ಕೂಡಾ ಇಲ್ಲ! ಅಂದಮೇಲೆ ನಾನು ಇದಕ್ಕೆ ಮುನ್ನುಡಿಯನ್ನು ಬರೆವುದೆಂದರೆ ಇನ್ನು ಈ ಜನ್ಮದಲ್ಲಿ ಸಲ್ಲ. ನನಗೆ ಅದು ಇನ್ನು ಸರ್ವಥಾ ಸಾಧ್ಯವಲ್ಲ. ಆದಕಾರಣ ನಾನು ತಮ್ಮ ಬಯಕೆಯನ್ನು ಸಲ್ಲಿಸಲಾರೆ!! ಹೀಗೆ ತಮ್ಮ ಅಪೇಕ್ಷೆಯನ್ನು ನನ್ನ ಪ್ರಾಯದ ಹಾಗೂ ನನ್ನ ಅನಾರೋಗ್ಯದ ದೆಸೆಯಿಂದ ನೆರವೇರಿಸಲಾರದ ಬಗ್ಗೆ ನನ್ನಲ್ಲಿ ಸರ್ವಥಾ ಯಾವೊಂದೂ ಬಗೆಯ ವಿಕಲ್ಪವೆಣಿಸದೆ ದಯಮಾಡಿ ನನ್ನನ್ನು ಕ್ಷಮಿಸಬೇಕಾಗಿ ವಿನಂತಿಸುತ್ತೇನೆ. ಆ ಬಗ್ಗೆ ನನ್ನ ಅನೇಕಾನೇಕ ಧನ್ಯವಾದಗಳು.

ತಮ್ಮ ಭಾಷಾಂತರದಲ್ಲಿಯ ಕೆಲಕೆಲ ಗೀತಗಳಲ್ಲಿ ನನ್ನ ಪ್ರಥಮ ದೃಷ್ಟಿಗೆ ತೋರಿದುದೆಂದರೆ, ಅದರಲ್ಲಿ ತಾವು ಉಪಯೋಗಿಸಿದ ವಿಶಿಷ್ಟ ಮಾದರಿಯ ಕನ್ನಡ ಭಾಷೆ ಹಾಗೂ ಶೈಲಿ. ಉದಾ: "ಅತ್ಯಂತ ಸಂತೋಷದಿಂದ" ಎಂಬಿತ್ಯಾದಿಯಾದ ಪ್ರಥಮ ಪದ್ಯವನ್ನು ನಾನಾದರೆ ಹೀಗೆ ಬರೆಯುತ್ತಿದ್ದೆ—"ನಿನ್ನ ಅತ್ಯಂತ ಸಂತೋಷದಿಂದ ನೀನು ನನ್ನನ್ನು ಅಂತ್ಯರಹಿತನಾಗಿಸಿರುವಿ. ಈ ಒಡಕ ಪಾತ್ರವನ್ನು (ಈ ಪಾತ್ರೆಯನ್ನು) ಆಗಾಗ ನೀನು ಬರಿದಾಗಿಸುತ್ತಿರುವಿ. ನಿರಂತರವೂ ನೀನು ಇದರಲ್ಲಿ ನವ ಜೀವನವನ್ನು ತುಂಬಿಸುತ್ತಿರುವಿ." "ಬೆಟ್ಟವನ್ನು ಏರುತ್ತಿರುವಾಗ ಬೆಟ್ಟದಿಂದ ಇಳಿಯುತ್ತಿರುವಾಗ ಈ [ಕೊಳಲನ್ನು ಹಿಡಿದು ( or ಹಿಡಕೊಂಡು) ಅಮರ ರಾಗ

ಗಳನ್ನು ನೀನು ನುಡಿಸುತ್ತಿರುವಿ" (ಇತ್ಯಾದಿ)...ತಾವು ಉಪಯೋಗಿಸಿದ ಬಗೆಯಂ ತಿರುಮುರುವಿನ ಭಾಷೆಯನ್ನು (ಉದಾ: ಅಂತ್ಯರಹಿತನಾಗಿಸಿದೆ ನೀನೆನ್ನನ್ನು ಇ) ಗದ್ಯದಲ್ಲಿ ನಾನೊಪ್ಪುವುದಿಲ್ಲ. (ಆದರೆ ತಾವೂ ಒಪ್ಪದಿರಬೇಕೆಂದೇನಿಲ್ಲ). ನಾನು ಒಪ್ಪುವ ಗದ್ಯ ಶೈಲಿ ಎಂದರೆ ಬಾಣದ ಗತಿಯಂತೆ ತೀರಾ ನೆಟ್ಟಗಾಗಿರಬೇಕು. ಇದೇ ನನ್ನ ಗದ್ಯ ಶೈಲಿಯ ಮೂಲ ಸೂತ್ರ. ನಾನು ಹೀಗೆ ಎನ್ನುವೆನೆಂದು ತಾವೂ ಹಾಗೆ ಎನ್ನಬೇಕೆಂದಿಲ್ಲ. ಆತಏವ ನನ್ನ ಈ ಮಾತನ್ನು ಬರೇ ಒಂದು ಸೂಚನೆ(suggestion) ಎಂದು ತಿಳಿಯಬೇಕೇ ವಿನಾ ಆದೇಶ (Direction) ಎಂದು ಸರ್ವಥಾ ಬಗೆಯ ಬಾರದು. ನೆನಪಿರಲಿ. ಇನ್ನೊಂದು ಮಾತು 1924ನೆಯ ಇಸವಿಯಿಂದ 1927 ನೆಯ ಇಸವಿಯೊಳಗೇನೋ ನಾನೂ ಇಂಗ್ಲೀಷು "ಗೀತಾಂಜಲಿ"ಯನ್ನು ಗದ್ಯದಲ್ಲೇ ಕನ್ನಡಿಸುತ್ತಿದ್ದೆ. ಆದರೆ ಸುಮಾರು 50 ರಿಂದ 60 ರೊಳಗೇನೋ ಪದ್ಯಗಳನ್ನು ಕನ್ನಡಿಸಿದ್ದೆ. ಅವುಗಳಲ್ಲಿ ಸುಮಾರು 36 ಪದ್ಯಗಳ ಗದ್ಯ ಭಾಷಾಂತರ "ಕನ್ನಡ ಸಹಕಾರಿ" ಎಂಬ ಪಕ್ಷ ಪತ್ರಿಕೆಯ ಪ್ರತಿ ಸಂಚಿಕೆಯಲ್ಲಿ 2-3 ರಂತೆ ಪ್ರಕಟವಾಗಿ ಬಂದಿದ್ದುವು. (ಅವುಗಳನ್ನು ಈಗ ನಿನ್ನೆ ಮೊನ್ನೆಯಿಂದ ಎಷ್ಟೋ ಹುಡುಕಾಡಿದೆ. ಅದು ಸಿಕ್ಕಲಿಲ್ಲ) ನಾನು ಬಂಗಾಳಿಯನ್ನು ಬಲ್ಲೆನಾದ್ದರಿಂದ ನನ್ನ ಕನ್ನಡ ಭಾಷಾಂತರದಲ್ಲಿ ಬಂಗಾಳಿಯನ್ನೂ ನೋಡುತ್ತಿದ್ದೆ. (ಆದರೆ ರವೀಂದ್ರರ ಇಂಗ್ಲೀಷು ಗೀತಾಂಜಲಿ ಬಂಗಾಳಿ ಗೀತಾಂಜಲಿಗಿಂತ ಎಷ್ಟೋ ಲೇಸಾಗಿದೆ.) ನನ್ನನ್ನು ಕನ್ನಡ ಭಾಷಾಂತರ ಮಾಡಲಿಕ್ಕೆ ಪ್ರೇರಿಸಿದ ಆ "ಕನ್ನಡ ಸಹಕಾರಿ"ಯ ಸಂಪಾದಕರಿಗೆ (Mr. late Sri Ullal Mangesh Rao, Sub Asst. Inspector of Schools, Retired) ಹೇಳಿದೆ, "ನಿಮ್ಮವರು ಎಷ್ಟೋ ಮಂದಿ ಸಾರಸ್ವತರು ಮುಂಬಯಿ ಯಲ್ಲಿ ಉಚ್ಚ ಪದವಿಗಳಲ್ಲಿ ಇದ್ದಾರೆ. ಅವರಿಗೆ ಒಬ್ಬೊಬ್ಬರ ಮುಖಾಂತರ ವಾದರೂ ಲಂಡನ್ನಿನ (London) ಮ್ಯಾಕ್ಮಿಲನ್ Company ಯವರಿಂದ ಕನ್ನಡ ಭಾಷಾಂತರದ ಬಗ್ಗೆ ಅನುಮತಿಯನ್ನು ತರಿಸಿಕೊಳ್ಳಿ" ಎಂದು, ಅದಕ್ಕವರು ಬಿಡಿ ಪದ್ಯವನ್ನು ಮಾಸಪತ್ರಿಕೆಯಲ್ಲಿ ಪ್ರಕಟಮಾಡಲಿಕ್ಕೆ ಅನುಮತಿ ಬೇಕೆಂದಿಲ್ಲ. ಅದನ್ನು ಭಾಷಾಂತರಿಸಿ ಮುಗಿಸಿ ಪತ್ರಿಕೆಯಲ್ಲಿ ಪ್ರಕಟಿಸಿ ಆದ ಮೇಲೆ ತಾನು ಮ್ಯಾಕ್ಮಿಲನ್‌ರ ಅನುಮತಿಯನ್ನು ತರಿಸುತ್ತೇನೆ, ಎಂದರು. ಅಷ್ಟರಲ್ಲಿ ಮುಂಬಯಿಯ ........ರಿಂದ ನನಗೆ ಹೀಗೆ ಪತ್ರ ಬಂತು- "ತಾವು ದಯಮಾಡಿ ತಮ್ಮ ಭಾಷಾಂತರವನ್ನು ಮುಂದರಿಸಬಾರದು. ಭಾಷಾಂತರ ಮಾಡಿದ ಪದ್ಯಗಳ ಕೂಡ ಪ್ರತಿಗಳನ್ನು ಅವರಿಗೆ ಕಳಿಸಿಕೊಡಬೇಕು" ಎಂದು. ಹಾಗೆ ಮಾಡಿ ಕೈತೊಳ ಕೊಂಡೆ. ಆ ಪ್ರಕರಣ ಅಲ್ಲಿಗೆ ಮುಗಿಯಿತು. ತಮ್ಮ ಭಾಷಾಂತರವನ್ನು ಅವರ ಒಪ್ಪಿಗೆ ಪಡಕೊಳ್ಳದೆ ಪ್ರಕಟಿಸುವಿರಾದರೆ ತಮಗೂ ಅದೇ ಬಗೆಯ ವಿಡ್ಡೂರ ಬಂದೀತೆಂದು ತಮಗೆ ಮುಂಜಾಗ್ರತೆಯ ಬಗ್ಗೆ ತಾನೆ ಎಚ್ಚರಿಸಲಿಕ್ಕೆ ಬರೆದೆ. ಅನುಭವದ ಕಥೆಯನ್ನು ಇಲ್ಲಿ ಬರೆದು ತಮ್ಮ ಸಮಯವನ್ನು ಹಾಳು ಮಾಡಿರು ತ್ತೇನೆ. ದಯಮಾಡಿ ಕ್ಷಮಿಸುವುದು.

ಇತಿ ನಮಸ್ಕಾರ



**ಗೋವಿಂದ ಪೈ**

೮೪

**ಎಸ್. ಎಲ್. ನಾರಾಯಣ ಭಟ್ಟ** (ಉಡುಪಿ) ೧೯-೨-೫೯

ಗೋವಿಂದ ಪೈ ಮಾಡುವ ನಮಸ್ಕಾರ. ತಮ್ಮ ತಾರೀಕು ಇಲ್ಲದ ಪತ್ರ ಇವತ್ತು ಮುಟ್ಟಿ ಧನ್ಯವಾದಗಳು.

ನನ್ನ ದೇಹಾವಸ್ಥೆ ಇತ್ತೀಗ ತೀರ ನಿಕೃಷ್ಟವಾದ ಅವಸ್ಥೆಯಲ್ಲಿದೆ. ತುಸಾ ನಡೆಯ ತೊಡಗಿದೆನೆಂದರೆ ಉಬ್ಬಸ ಬರಹತ್ತಿ ತಿದಿಯಂತೆ ಏದಹತ್ತಿ ನಡೆಯಲಾಗುವುದಿಲ್ಲ. ನಡೆವುದನ್ನು ನಿಲ್ಲಿಸಿದರೆ ಉಬ್ಬಸವೂ ಕೊಂಚ ಕಡಮೆಯಹಾಗುತ್ತದೆ; ಅದಾಗಿ ನಡೆವುದನ್ನು ಅತೀವ ಕಷ್ಟದಿಂದ ಮಾಡಬೇಕಾಗುವುದರಿಂದ ಕಳೆದ ೬-೭ ತಿಂಗಳಿಂದ ಇಲ್ಲಿಂದ ಮನೆಬಿಟ್ಟು ಹೊರಗೆ ಹೋಗಿಲ್ಲ! ತಾವು ಕೇಳಿದರೆ ನಂಬಲೊಲ್ಲಿರಿ! ಅದು ಕಾರಣ ನನ್ನ ತ್ರಾಣವೀಗ ತೀರ ಕುಂದಿ, ತುಂಬ ಅಶಕ್ತಿ ಉಂಟಾಗಿದೆ. ಕೆಲ ತಿಂಗಳ ಹಿಂದೆ ಉಂಟಾಗಿದ್ದ ಒಂದು ಕಾಯಿಲೆಯಿಂದ ದೇಹದ ಆರೋಗ್ಯವಿಷ್ಟು ಕುಂದಿ ಹೋಗಿದೆ. ಇದು ದೇಹಸ್ಥಿತಿ. ಅತ್ತಕಡೆ, ಆಯುರ್ವೇದವನ್ನು ಕುರಿತು ನಾನು ರವೇಸೂ ಬಲ್ಲವನಲ್ಲ. ಆ ಕುರಿತು ಈವರೆಗೆ ಅವಾಕ್ಷರವನ್ನೂ ಓದಿ ಅರಿಯೆ. ಕೇಳಿ ಅರಿಯೆ, ನನಗೆ ಆ ಶಾಸ್ತ್ರದಲ್ಲಿ ಲೇಶಮಾತ್ರವೂ ಆದರವಿಲ್ಲ; ಅದೇ ಅಲ್ಲ, ಆಂಗ್ಲ ವೈದ್ಯಶಾಸ್ತ್ರದಲ್ಲೂ ನನಗೆ ಆದರವಿಲ್ಲ. ಕಾವ್ಯ-ನಾಟಕ-ಸಾಹಿತ್ಯ ಇವುಗಳ ಹೊರಗೆ ಈಗೀಗ ಯಾವುದೂ ಮನಸ್ಸಿಗೆ ಹತ್ತುವುದಿಲ್ಲ. ಆದಕಾರಣ ಆಯುರ್ವೇದವನ್ನು ಕುರಿತು ನಾನು ಬರೆಯಬೇಕೆಂದರೆ ತಿಗುರಿಯಾಡಿಸುವ ಒಡ್ಡರವನು ರಾಜಶೇಖರ ವಿಳಾಸವನ್ನು ಕುರಿತು ಬರೆಯಬೇಕೆಂಬಂತೆಯೇ ವಿನಾ ಅನ್ಯಪರಿಣಾಮವಿಲ್ಲ.

ಅತಏವ ನನ್ನ ಈಗಣ ಅಸೌಖ್ಯದ ಹಾಗೂ ಅದರ ಜತೆಯ ಅಶಕ್ತಿಯ ಮೇಲೂ ಆಯುರ್ವೇದವನ್ನು ಕುರಿತ ನನ್ನ ತೀರ ಅಜ್ಞಾನದ ಮೇಲೂ ತಮ್ಮ ಕೃಪಾದೃಷ್ಟಿಯನ್ನಿಟ್ಟು, ದಯಮಾಡಿ ನನ್ನನ್ನು ಕ್ಷಮಿಸಬೇಕಾಗಿ ವಿನಂತಿಸುತ್ತೇನೆ. ಬಹಳ ಉಪಕಾರ. ಸಾವಿರಾರು ಧನ್ಯವಾದಗಳು.

ಆಯುರ್ವೇದದಲ್ಲಿ ತಜ್ಞರಾದವರನ್ನು ಕುರಿತು ನಾನು ಅಷ್ಟೇನೂ ಅರಿಯೆ. ಈ ನಮ್ಮ ಊರಲ್ಲಿ ಒಬ್ಬಿಬ್ಬರೇನೋ ಆಯುರ್ವೇದ ವೈದ್ಯರು ಇರುತ್ತಾರೆಂದು ನನ್ನ ನೆನಪು – ಮಂಜೇಶ್ವರದಲ್ಲಿ – ವೈದ್ಯ ಎಮ್. ನರಸಿಂಹ ವಿಟ್ಠಲ ಭಟ್ಟ, ಮಂಜೇಶ್ವರ; ಇತರರು ಆಯುರ್ವೇದದ ಜತೆಗೆ ಆಂಗ್ಲ ವೈದ್ಯಶಾಸ್ತ್ರವನ್ನು ಕಲಿತು L.M.P. ಪಾಸಾದವರು. ಅವರ ಗೊಡವೆ ತಮಗಿಲ್ಲವಷ್ಟೇ.
ವಿಶೇಷವೇನಿಲ್ಲ.

ಇಲ್ಲಿ ನಾವೆಲ್ಲರೂ ಇಲ್ಲಿ ಕ್ಷೇಮದಿಂದಿರುತ್ತೇವೆ; ಅಲ್ಲಿ ತಮ್ಮಲ್ಲಿ ತಾವೂ ತಮ್ಮವರೆಲ್ಲರೂ ಶ್ರೀ ಕೃಪೆಯಿಂದ ಸುಖಕ್ಷೇಮದಿಂದಿರುತ್ತೀರಿ ಎಂದು ನಂಬುತ್ತೇನೆ. ಶ್ರೀ ದೇವರು ಸದಾ ಹಾಗೆ ನಡೆಸುತ್ತಿರಲಿ!

ಇತಿ ನಮಸ್ಕಾರ

**ಬೈಕಾಡಿ ವೆಂಕಟಕೃಷ್ಣರಾಯ** (ಬ್ರಹ್ಮಾವರ) ೨೪-೩-೫೯

ಗೋವಿಂದ ಪೈ ಮಾಡುವ ನಮಸ್ಕಾರ. ತಾವು ಕೆಲವು ದಿನಗಳ ಹಿಂದೆ ಬರೆದ ಕಾರ್ಡು ಮುಟ್ಟಿ ಆ ಬಗ್ಗೆ ಧನ್ಯವಾದಗಳು. ತಮ್ಮ ಪತ್ರ ಮುಟ್ಟುವ ಮುಂಚಿನ ದಿನವೇನೋ ಇಲ್ಲಿಯ ಹಾಯ್‌ಸ್ಕೂಲಿನ ಕನ್ನಡ ಅಧ್ಯಾಪಕಿಯರೂ ಅಧ್ಯಾಪಕರೂ (Srimad Anantheshwar High Schol, Manjeshwar) ನನ್ನ ಬಳಿಗೆ ಬಂದು ಇತ್ತೀಚೆ ಮೈಸೂರು ಸರ್ಕಾರದವರು ಪ್ರಕಟಿಸಿರುವ ಹಾಗೂ ಮೊನ್ನೆ ಮಂಗಳೂರಲ್ಲಿ ಜರುಗಿದ ಪ್ರದರ್ಶನದಲ್ಲಿ ಮಾರಾಟವಾದ ಶ್ರೀ ಶ್ರೀ ಕುಮಾರ ವ್ಯಾಸನ ಕನ್ನಡ (ಗದುಗಿನ) ಭಾರತದ ಪ್ರತಿಯನ್ನು ನನಗೆ ತಂದುಕೊಟ್ಟು ಅದರ ಪೀಠಿಕಾ ಸಂಧಿಯಲ್ಲಿ ಕೊನೆಯದಾದ ಭಾಮಿನೀ ಷಟ್ಪದಿಯ ಅರ್ಥವನ್ನು ಕುರಿತು ವಿಚಾರಿಸಿದರು. ನನಗೆ ಆಗ್ಗೆ ಉಂಟಾದ ದೇಹಾಲಸ್ಯದ ಸಲುವಾಗಿ ನಾನಾಗ್ಗೆ ನಿತ್ರಾಣದಲ್ಲಿದ್ದೆನಾದರೂ ಆ ಪದ್ಯವನ್ನು ಕಂಡು ನನಗೆ ಕಿವಿಯಲ್ಲಿ ಗಾಳಿ ಊದಿತು. ನಾನು ಅದರ ಅರ್ಥವನ್ನು ವಿಚಾರಿಸತೊಡಗಿ ನಿನ್ನೆ ಅವರಿಗೆ ಬರೆದುಕೊಟ್ಟೆ. ಅವರಿಗೂ ಬೇರೆ ಅಲ್ಲಲ್ಲಿಗೆ ಕಳುಹಿಸಿಕೊಡತಕ್ಕಂತೆಯೂ ಪ್ರತಿಗಳು ಹೆಚ್ಚಿಗೆ ಒಂದೆರಡು ಬೇಕಾಗಿದ್ದು ಅವನ್ನು ಸಂಪ್ರತಿಸುತ್ತಿದ್ದಾಗ ನನಗೂ ಒಂದು ಪಕ್ಕಾ ಪ್ರತಿಯನ್ನು ಬರೆಯಿಸಿ ತರಸಿಕೊಂಡೆ. ಅದನ್ನೀಗ ಇದರೊಂದಿಗೆ ಮಡಗಿ ತಮಗೆ ಕಳುಹಿಸಿಕೊಟ್ಟಿರುತ್ತೇನೆ. ಹೀಗೆಲ್ಲ ಕೆಲವು ದಿನಗಳ ವಿಳಂಬವಾಗ ಬೇಕಾದ ಬಗ್ಗೆ ದಯಮಾಡಿ ಕ್ಷಮಿಸುವುದು.

ನನ್ನ ಆರೋಗ್ಯವೀಗ "ಗಾಳಿಗೊಡ್ಡಿದ ಸೊಡರಿನಂತೆ" ಅತ್ತಿತ್ತ ಅಲಗಾಡುತ್ತಿದೆ. ಇವತ್ತು ನಾನು ಹುಟ್ಟಿದ ದಿನ. ಇಂದು 77ನೆಯ ವರ್ಷವಾರಂಭಿಸುತ್ತದೆ. ಇನ್ನೆಷ್ಟು ಕಾಲ ಬದುಕಬೇಕು, ಸ್ವಾಮಿ? ಶ್ರೀ ದೇವರು ತಮಗೂ ತಮ್ಮವರೆಲ್ಲರಿಗೂ ದೀರ್ಘಾಯುರಾರೋಗ್ಯವಿತ್ತು ಉತ್ತರೋತ್ತರ ಅಭಿವೃದ್ಧಿ ಮಾಡಿ ಕಾಪಾಡಲಿ ಎಂದು ಆತನಲ್ಲಿ ಪ್ರಾರ್ಥಿಸುತ್ತೇನೆ.

ಇತಿ ನಮಸ್ಕಾರ

Encl: ಕನ್ನಡ (ಗದುಗಿನ) ಭಾರತದಲ್ಲಿಯ ಜಟಿಲವಾದೊಂದು ಸಮಸ್ಯೆ.
P.S. ನಾನು ತಮ್ಮ ಕಾರ್ಡು ಇಲ್ಲಿ ಬರುವಾಗಲೂ ಆಮೇಲು ಕೆಲದಿನಗಳಿಗೂ ಸಾಕಷ್ಟು ಅಶಕ್ತನಾಗಿದ್ದುದರಿಂದ ಅದಕ್ಕೆ ಕೂಡಲೇ ಪ್ರತ್ಯುತ್ತರಿಸಲಾಗಲಿಲ್ಲ. ದಯಮಾಡಿ ಕ್ಷಮಿಸುವುದು.

ಟಿಪ್ಪಣಿ : ಈ ಜಟಿಲ ಪದ್ಯವೆಂದರೆ "ವೇದಪುರುಷನ ಸುತನ..." ಇದರ ವಿವರಣೆಯುಳ್ಳ ಅವರ ಕಿರು ಲೇಖವು 'ನವಭಾರತ' ದಿನಪತ್ರಿಕೆಯು ೧೯೫೯ರ ಸಂಚಿಕೆಯಲ್ಲಿ ಪ್ರಕಟವಾಗಿದೆ.

೮೬

**ಬೈಕಾಡಿ ವೆಂಕಟಕೃಷ್ಣರಾವ** (ಬ್ರಹ್ಮಾವರ) ೨೭-೩-೫೯

ಗೋವಿಂದ ಪೈ ಮಾಡುವ ನಮಸ್ಕಾರ.

ತಮ್ಮ ನಿನ್ನೆಯ ಕಾರ್ಡು ಇಲ್ಲಿಗೆ ಇವತ್ತು ಮುಟ್ಟಿ ಆ ಬಗ್ಗೆಯೂ, ಆದರಲ್ಲಿ ತಾವು ನನ್ನನ್ನು ಕುರಿತು ಬರೆದ ತಮ್ಮ ಸದಾಶಯುಗಳ ಬಗ್ಗೆಯೂ ನಾನು ತಮಗೆ ತುಂಬಾ ಋಣಿಯಾಗಿರುತ್ತೇನೆ. ಬನ್ನಿ, ತಮಗೆ ಅವಕಾಶ ದೊರೆತಾಗ ದಯ ಮಾಡಿ ಇತ್ತ ಕಡೆಗೆ ಒಮ್ಮೆ ಬೇಗನೆ ಬಂದು ಹೋಗಿ. ಬಹಳ ಉಪಕಾರ. ಅನೇಕ ಕಾಲವಾಯಿತು ನಾವು ಒಬ್ಬರನ್ನೊಬ್ಬರು ಕಂಡು ಮಾತನಾಡದೆ. ಬಹಳ ಉಪಕಾರ ಆ ಭಾಮಿನಿ ಷಟ್ಪದಿಯನ್ನು ಕುರಿತ ನನ್ನ ಉತ್ತರವು ಬಹಿರಂಗ ವಾದುದು ;--ಅದರ ಅರ್ಥ ಏನು ? ಮತ್ತು ಹೇಗೆ ? ಎಂದು ತಿಳಿಯಬೇಕೆಂಬ ಓದುಗರೆಲ್ಲರಿಗಾಗಿಯೂ ಬರೆದ ಉತ್ತರವಿದೆ. ಆದರೆ ಅಷ್ಟು ಉದ್ದವಾದ ಉತ್ತರವನ್ನು ಪತ್ರಿಕೆಯಲ್ಲಿ ಪ್ರಕಟಿಸಿಯಾರೋ ? ಎಂಬ ಸಂಶಯ, ಅಷ್ಟೆ, ವಿಶೇಷವೇನಿಲ್ಲ.

ಇತಿ ನಮಸ್ಕಾರ

೮೭

**ಬೈಕಾಡಿ ವೆಂಕಟಕೃಷ್ಣರಾವ** (ಬ್ರಹ್ಮಾವರ) ೭-೪-೫೯

ಗೋವಿಂದ ಪೈ ಮಾಡುವ ನಮಸ್ಕಾರ. ತಮ್ಮತ್ತಣ ಕರ್ನಾಟಕ ಸಂಘದ ಪರವಾಗಿ ತಾವು ಪ್ರೀತಿಪೂರ್ವಕವಾಗಿ ಕಳುಹಿಸಿದ ಆಮಂತ್ರಣ ಪತ್ರಿಕೆ ಇಲ್ಲಿಗೆ ಇವತ್ತು ಮುಟ್ಟಿ ತಮ್ಮ ಸಂಘಕ್ಕೂ, ತಮಗೂ ಅನೇಕ ಧನ್ಯವಾದಗಳು. ನಾಡದು 9ನೆಯ ತಾರೀಖಿನ ನಮ್ಮ ಯುಗಾದಿಯ ದಿನ ತಮ್ಮ ಸಂಘದವರು ಆಚರಿಸಲಿಕ್ಕಿರುವ 'ಉಗಾದಿಯ' ಸಾಹಿತ್ಯೋತ್ಸವವು ಯಶಸ್ವಿಯಾಗಿ ನೆರವೇರುವಂತೆ ಶ್ರೀ ಪರಮಾತ್ಮನು ಹರಸಲಿ ಎಂದು ಪ್ರಾರ್ಥಿಸುತ್ತೇನೆ.

ಇತಿಶಮ್

ನಮ್ಮತ್ತಣ 'ಯುಗಾದಿ' ಎಂಬ ಪದಕ್ಕೆ ಮೈಸೂರತ್ತ ಕಡೆಯಲ್ಲಿರುವ 'ಉಗಾದಿ' ಎಂಬ ರೂಪವನ್ನು ಇಲ್ಲಿಯೂ ಬಳಕೆಯಲ್ಲಿ ಕಂಡಿರಾ ?

ಇತಿ ನಮಸ್ಕಾರ

೮೮

**ಬೈಕಾಡಿ ವೆಂಕಟಕೃಷ್ಣರಾವ** (ಬ್ರಹ್ಮಾವರ) ೧೮-೫-೫೯

ಗೋವಿಂದ ಪೈ ಮಾಡುವ ನಮಸ್ಕಾರ. ತಮ್ಮ ಕರ್ಣಾಟಕ ಸಂಘದ ಪರವಾಗಿ ತಾವು ಪ್ರೀತಿಪೂರ್ವಕವಾಗಿ ಕಳುಹಿಸಿರುವ ಆಮಂತ್ರಣ ಪತ್ರಿಕೆ ಇಲ್ಲಿ ಮುಟ್ಟಿ ಆ ಬಗ್ಗೆ ಧನ್ಯವಾದಗಳು.

ನನ್ನ ಮಿತ್ರವರ್ಯರಾದ ಶ್ರೀ ಶಿವರಾಮ ಕಾರಂತರಿಗೆ ಇಂಥಾ ಗೌರವಗಳು ಬೇಕಾಗಿಲ್ಲ. ಅವರ ಕೃತಿಗಳೇ ಅವರ ಪ್ರತ್ಯಕ್ಷ ಗೌರವ. ಅಥವಾ ಅವರನ್ನು ಗೌರವಿಸುವುದೆಂದರೆ ತಂತಮ್ಮನ್ನು ಗೌರವಿಸಿಕೊಳ್ಳುವಂತೆ ತಾನೆ. ಆದರೆ ಲೋಕ ರೂಢಿ ಎಂದು ಇದೆಯಷ್ಟೇ? ಆ ಮೇರೆಗೆ ಅವರನ್ನು ಗೌರವಿಸಬೇಕು. ಗೌರವಿಸಲೇ ಬೇಕು. ಆ ಮೇಲುಕೆಲಸವನ್ನು ತಾವೀಗ ಕೈಗೊಂಡಿರುತ್ತೀರಿ. ಆ ಬಗ್ಗೆ ತಮ್ಮನ್ನು ಅಭಿನಂದಿಸುತ್ತೇನೆ. ಹಾಗೂ ತಮ್ಮ ನಾಡದಿನ ಸಮಾರಂಭವು ಯಶಸ್ವಿಯಾಗಿ ನೆರವೇರುವಂತೆ ಶ್ರೀ ದೇವರು ಅನುಗ್ರಹಿಸಲಿ! ಎಂದು ಪ್ರಾರ್ಥಿಸುತ್ತೇನೆ. ಇತಿ ಶಮ್, ನನ್ನ ಮಿತ್ರವರ್ಯರಾದ ಶ್ರೀ ಕಾರಂತರಿಗೂ, ಶ್ರೀ ಟಿ. ಎ. ಪೈಯವರಿಗೂ ನನ್ನ ಪ್ರೀತಿಪೂರ್ವಕವಾದ ನಮಸ್ಕಾರಗಳನ್ನು ದಯಮಾಡಿ ತಿಳಿಯಪಡಿಸುವುದು. ಧನ್ಯವಾದಗಳು. ಬಹಳ ಉಪಕಾರ. ತಮಗೆಲ್ಲರಿಗೆ ನನ್ನ ನಮಸ್ಕಾರಗಳು.

೮೯

**ಎಸ್. ಎಂ. ಶೆಟ್ಟಿ ಶಿವುಂಜೆ ಪರಾರಿ** (ಮುಂಬಯಿ) ೨೯-೯-೧೯೫೬

ಗೋವಿಂದ ಪೈ ಮಾಡುವ ನಮಸ್ಕಾರ. ತಮ್ಮ ಅಗೋಸ್ತು 1ನೆಯ ತಾರೀಕಿನ ಪತ್ರವೂ ಅದರ ಬೆನ್ನಲ್ಲಿಯೇ ಬಂದ ತಮ್ಮ "ನವಪ್ರಭಾತ"ವೆಂಬ ಮರಾಟೀ ಮೂಲದಿಂದ ಕನ್ನಡಿಸಿದ ಭಾಷಾಂತರವೂ ಇಲ್ಲಿಗೆ ಕೈಸೇರಿ, ಅನೇಕ ಧನ್ಯವಾದಗಳು. ಈ ನಡುವೆ ನನಗಾಗಿದ್ದ ಕೊಂಚ ಅಸೌಖ್ಯದ ದೆಸೆಯಿಂದ ನಾನು ಬಳಲಿದ್ದ ಕಾರಣ ಆ ಪುಸ್ತಕವನ್ನು ಓದಿನೋಡಿ ತಮಗೆ ಈ ವರೆಗೆ ಬರೆದು ತಿಳಿಸುವರೆ ಇಷ್ಟು ವಿಳಂಬವಾಗಬೇಕಾದ ಬಗ್ಗೆ ದಯಮಾಡಿ ಕ್ಷಮಿಸುವುದು.

ನಿನ್ನೆ ಮೊನ್ನೆ ಓದಿನೋಡಿದೆ. ನಾನು ಮರಾಟೀ ಮೂಲ ನಾಟಕವನ್ನು ಓದಿಲ್ಲ ವಾದರೂ ತಮ್ಮ ಭಾಷಾಂತರ ಚೊಕ್ಕವಾಗಿದೆ. ಅದೊಂದು ಭಾಷಾಂತರವಲ್ಲ, ಸ್ವತಂತ್ರವಾದೊಂದು ಕೃತಿ ಎನಿಸುವಂತಿದೆ. ತಮ್ಮನ್ನು ಆ ಬಗ್ಗೆ ಮನವಾರೆ ಅಭಿನಂದಿಸುತ್ತೇನೆ.

ಪ್ರಸಂಗವಶವಾಗಿ ಒಂದೆರಡು ಮಾತುಗಳನ್ನು ಹೇಳಬಹುದಾದರೆ, ತಮ್ಮ ಈ ಪುಸ್ತಕದ ಅಕ್ಷರಿಕೆಯಲ್ಲಿ (Spelling) ಅನೇಕ ದೋಷಗಳಿವೆ. ಉದಾ : (1) ಪುಟ XIII "ಸಾಮ್ರಾಟನಿಗೆ" ಅಲ್ಲ, "ಸಮ್ರಾಟನಿಗೆ" ಎಂದಾಗಬೇಕು. ಸಮ್ರಾಟ್- ಸಾಮ್ರಾಟ ಅಲ್ಲ-ಎಂಬ ರೂಪ ಸಂಸ್ಕೃತದಲ್ಲಿ ಪ್ರಥಮಾ ವಿಭಕ್ತಿಯ ಏಕವಚನದಲ್ಲಿ ಮಾತ್ರ ಉಪಯೋಗಿಸಲ್ಪಡುತ್ತದಲ್ಲದೆ. ಕನ್ನಡದಲ್ಲಿ ಉಪಯೋಗಿಸಲ್ಪಡಲಾರದು. ಅದಲ್ಲದೆ" ಸಮ್ರಾಟ" = Emperor. ಸಾಮ್ರಾಜ್ಯ = Empire. ಮರಾಟೀ ಮೂಲ ದಲ್ಲಿ "ಸಾಮ್ರಾಟ" ಎಂಬ ಶಬ್ದವು ಪ್ರಯೋಗಿಸಲ್ಪಟ್ಟುದಾದರೆ ಅದು ಶುದ್ಧ ತಪ್ಪು! (2) "ಸಂಘ ಮಿತ್ರಳು" "ರೇಖಾಳು" ಅಲ್ಲ, ಸಂಘಮಿತ್ರಳು, ರೇಖಳು ಇ॥ (3) ಪುಟ 11. "ನಂತರ" ಅಲ್ಲ, ಅನಂತರ. (4) ಪುಟ 5. "ನೆಗಾಡು" ಅಲ್ಲ, "ನಗಾಡು"

(Laugh) ನೆಗೆಯಾಡು — to jump ಇತ್ಯಾದಿ. ಆದಕಾರಣ ಇನ್ನು ಬರೆವಲ್ಲಿ ತಾವು ವ್ಯಾಕರಣವನ್ನು ಚೆನ್ನಾಗಿ ಗಮನಿಸಬೇಕು. ಹಾಗೂ ಅಕ್ಷರಿಕೆಯನ್ನು (Spelling) ತಿದ್ದಿಕೊಳ್ಳಬೇಕು. ಏವಂಚ ಹಾಗೆ ಮಾಡುವುದು ಉತ್ತಮ. ಇನ್ನು ಮುಂದೆ ತಾವು ಇದಕ್ಕೂ ಚಲೋವಾದ ಅನುವಾದಗಳನ್ನು ಮಾತ್ರವಲ್ಲ ಸ್ವತಂತ್ರ ಕೃತಿಗಳನ್ನು ಕೂಡಾ ರಚಿಸಿ ಕನ್ನಡ ಸಾಹಿತ್ಯದಲ್ಲಿ ಹೆಸರುವಾಸಿಯಾಗಿ ಚಿರಕಾಲ ಬಾಳುತ್ತಿರುವಂತೆ ಶ್ರೀ ದೇವರು ಅನುಗ್ರಹಿಸಲಿ ಎಂದು ಆತನನ್ನು ಪ್ರಾರ್ಥಿಸುತ್ತೇನೆ.

ಇಷ್ಟು ಚಿಕ್ಕ ಪ್ರಾಯದಲ್ಲಿ ಇಂಥಾ ಮೇಲಾದ ಭಾಷಾಂತರವನ್ನು ಮಾಡಿರುವಲ್ಲಿ ಈ ಕೆಲವು ತಪ್ಪುಗಳಾದರೆ ಏನೂ ಗಣ್ಯವಲ್ಲ. ದೇವರು ಇನ್ನು ಮುಂದೆ ಬಹಳ ಮೇಲಾದ ಕೃತಿಗಳನ್ನು ತಮ್ಮಿಂದ ಮಾಡಿಸಿಕೊಳ್ಳುವನು.

ತಥಾಸ್ತು!

೯೦

**ಬೈಕಾಡಿ ವೆಂಕಟಕೃಷ್ಣರಾವ** (ಬ್ರಹ್ಮಾವರ) ೨೦-೧೧-೫೯

ನಮಸ್ಕಾರ. ನಿಮ್ಮ ಆಮಂತ್ರಣ ಪತ್ರಿಕೆ ಇಲ್ಲಿಗೆ ಕೈಸೇರಿ ಧನ್ಯವಾದಗಳು. ನನ್ನ ಮಿತ್ರವರ್ಯರಾದ ಕವಿವರ್ಯ ಶ್ರೀ ದ. ರಾ. ಬೇಂದ್ರೆಯವರಿಗೆ ನಾಡದು ೨೩ನೆಯ ತಾರೀಖಿನಂದು ನಿಮ್ಮ ಕರ್ನಾಟಕ ಸಂಘವು ಮಾನಪತ್ರವನ್ನು ಅರ್ಪಿಸಲಿಕ್ಕೆ ಕೈಗೊಳ್ಳಲಿರುವ ಸಮಾರಂಭವು ಬಹಳ ಯಶಸ್ವಿಯಾಗಿ ನೆರವೇರುವಂತೆ ಶ್ರೀ ಪರಮಾತ್ಮನು ಅನುಗ್ರಹಿಸಲಿ! ಎಂದು ಪ್ರಾರ್ಥಿಸುತ್ತೇನೆ.

ಇತಿ ಶಮ್!

ನನ್ನ ಮಿತ್ರವರ್ಯರಾದ ಶ್ರೀ ಬೇಂದ್ರೆಯವರಿಗೂ, ಲಲಿತ ಸಾಹಿತ್ಯ ಮಾಲೆಯ ಶ್ರೀ ದ. ಬಾ. ಕುಲಕರ್ಣಿಯವರಿಗೂ ನನ್ನ ಪ್ರೀತಿಪೂರ್ವಕವಾದ ನಮಸ್ಕಾರಗಳನ್ನು ದಯಮಾಡಿ ತಿಳಿಯಪಡಿಸಬೇಕಾಗಿ ವಿನಂತಿಸುತ್ತೇನೆ. ಬಹಳ ಉಪಕಾರ. ಇತಿ ನಿಮಗೂ ನಿಮ್ಮ ಸಂಘದ ಸದಸ್ಯ ಮಹಾಶಯರೆಲ್ಲರಿಗೂ ನನ್ನ ನಮಸ್ಕಾರಗಳು.

೯೧

**ಜಿ. ಎನ್. ಲಕ್ಷ್ಮಣ ಪೈ** (ಪುತ್ತೂರು) ೬-೧೨-೫೯

ಗೋವಿಂದ ಪೈ ಮಾಡುವ ನಮಸ್ಕಾರ. ತಾವು ಪ್ರೀತಿಪೂರ್ವಕವಾಗಿ ಮೊನ್ನೆ ನನಗಿತ್ತ ಕೊಂಕಣಿ ನಾಟಕವನ್ನು ಓದಿ ನೋಡಿದೆ. ಬಹಳ ಸೊಗಸಾಗಿದೆ. ಇಂಥವೇ ನಾಟಕಗಳನ್ನು ಸಣ್ಣ ಕಥೆಗಳನ್ನೂ ಕೊಂಕಣಿಯಲ್ಲಾಗಲಿ ಕನ್ನಡದಲ್ಲಾಗಲಿ ಬರೆದು

ಸಮಾಜದಲ್ಲಿ ಹುರಿ ಎಬ್ಬಿಸಿದಿರೆಂದರೆ ಅದೊಂದು ಶ್ಲಾಘ್ಯವಾದ ಕೆಲಸವನ್ನು ಮಾಡಿದಂತಾಯಿತು. ಆಬಗ್ಗೆ ದೇವರ ಅನುಗ್ರಹ ತಮಗೆ ನೆರವಾಗಲಿ ಎಂದು ಕೋರುತ್ತೇನೆ.

ಇತಿ ನಮಸ್ಕಾರ

೯೨

**ಕೆ. ಗೋಪಾಲರಾವ** (ಕಡಬ) ೨೯-೧೨-೫೯

ಗೋವಿಂದ ಪೈ ಮಾಡುವ ನಮಸ್ಕಾರ. ನೀವು ಕಳುಹಿಸಿಕೊಟ್ಟಿರುವ ನಿಮ್ಮ ದಿವಂಗತರಾದ ಅಣ್ಣ ಶ್ರೀ ಶ್ರೀ ರಾಧಾಕೃಷ್ಣರಾಯರ "ಚೆಲುವು" ಎಂಬ ಕವಿತೆಗಳ ಸಂಗ್ರಹ ಕೈಸೇರಿ, ಆ ಬಗ್ಗೆ ಧನ್ಯವಾದಗಳು- ಓದಿ ನೋಡಿದೆ. ಕವನಗಳೆಲ್ಲವೂ ಚೆನ್ನಾಗಿವೆ. ಅವಲ್ಲಿ ಕೆಲವು ಮತ್ತೂ ಚೆನ್ನಾಗಿವೆ. ಉದಾ : "ಚೆಲುವು" (ಪು. 1) "ಚಿರಬಾಳು" (ಪು. 5) "ಹುಟ್ಟು" (ಪು. 7) "ವಿಶಿಷ್ಟರನ್ನು ನೆನೆದು" (ಪು. 23) ಇತ್ಯಾದಿ....ಇದರ ರಚಕ ಮಹಾಶಯರು ಅವರ ಪ್ರಾಯದ 20ರಷ್ಟರ ಕೀರ ಎಳವೆಯೊಳಗೇ ಇಷ್ಟು ಚಲೋ ಕವನಗಳನ್ನು ಬರೆದರೆಂದರೆ, ಅವರು ದೀರ್ಘಾಯುವಾಗಿ ಬಾಳಿದ್ದರೆ ಇನ್ನೆಷ್ಟು ಮೇಲಾದ ಕವಿತೆಗಳನ್ನೂ, ಕಾವ್ಯಗಳನ್ನೂ ರಚಿಸುತ್ತಿರಲಿಲ್ಲ ? ಎಂಬ ಪ್ರಶ್ನೆಗೆ ಯಾವ ಓದುಗರದಾದರೂ ಮನಸ್ಸು ಇಂಬಾಗದಿರದು. ಆದರೆ ಮಾಡಲೇನು ? ದೈವಚಿತ್ತ, ಅದರ ಮುಂದೆ ಯಾರದೇನೂ ನಡೆಯುವುದಿಲ್ಲವಷ್ಟೇ? ಅದಕ್ಕೆ ಎಲ್ಲರೂ ತಲೆಬಾಗಬೇಕು... ಅಷ್ಟೇ. ಕವನಗಳನ್ನು ಪ್ರಕಟಿಸಿ, ನಿಮ್ಮ ಭ್ರಾತೃಭಕ್ತಿಯ ಕರ್ತವ್ಯವನ್ನು ಮೇಲಾಗಿ ನೆರವೇರಿಸಿರುವಿರಿ. ಆ ಬಗ್ಗೆ ನಿಮಗೆ ನನ್ನ ಹಾರ್ದಿಕ ಧನ್ಯವಾದಗಳು.

ಇತಿ ನಮಸ್ಕಾರ

೯೩

**ವಿರ್ಯ ಲಕ್ಷ್ಮೀನಾರಾಯಣ ಆಳ್ವ** (ಬಂಟವಾಳ) ೧೫-೧-೬೦

ಗೋವಿಂದ ಪೈ ಮಾಡುವ ನಮಸ್ಕಾರ. ನಿಮ್ಮ "ಶ್ರೀ ರಾಮಾಶ್ವಮೇಧದ ರಸತರಂಗಗಳು" ಎಂಬ ಪುಸ್ತಕ ಇಲ್ಲಿಗೆ ಕೈಸೇರಿ, ಆ ಬಗ್ಗೆ ಅನೇಕ ಧನ್ಯವಾದಗಳು. ಓದಿ ನೋಡಿ ಬಹಳ ಸಂತೋಷವಾಯಿತು. ಇಂತಹದೊಂದು ಗ್ರಂಥವನ್ನು ಕನ್ನಡಕ್ಕೆ ಇತ್ತಿರುವ ಬಗ್ಗೆ ನಿಮ್ಮನ್ನು ಅಭಿನಂದಿಸುತ್ತೇನೆ. ನೀವು ಆ ಗ್ರಂಥದಲ್ಲಿ ನಮ್ಮ ಮುದ್ದಣನ ಕೀರ್ತಿಯ ಅಸಾಮಾನ್ಯವಾದ ಸುವರ್ಣದ ಚೌಕಟ್ಟಿಗೆ ಒಪ್ಪುವಂಥಾ ಕೆಲಕೆಲ ಹೂವುಗಳನ್ನು ಅಲ್ಲಲ್ಲಿ ಕೀಲಿಸಿರುತ್ತೀರಿ ಎಂದು ನನಗೆನಿಸಿತು. ಈ ಮಾತನ್ನು ಒಪ್ಪುವವರು ಒಪ್ಪಿಕೊಳ್ಳಲಿ, ಒಲ್ಲದವರು ಒಲ್ಲದಿರಲಿ, ಅದು ನನ್ನ ಗೊಡವೆಯಲ್ಲ.....ನನಗಾದರೋ ನಮ್ಮ ಮುದ್ದಣನು ಆದಿ ಪಂಪನ ಪೀಳಿಗೆಯಲ್ಲಿ ಕನ್ನಡ ಸಾಹಿತ್ಯದ ಗದ್ಯ ಮಹಾಕವಿ ಎನಿಸುತ್ತದೆ. ಅಷ್ಟು ಸಾಕು.

ನಿಮ್ಮನ್ನು ಮತ್ತೊಮ್ಮೆ ಮನಸಾರೆ ಅಭಿನಂದಿಸುತ್ತೇನೆ.

ಇತಿ ನಮಸ್ಕಾರ

೯೪

**ಎಂ. ವಾಸುದೇವರಾವ** (ಸುರತ್ಕಲ್) ೧೦-೩-೬೦

ಗೋವಿಂದ ಪೈ ಮಾಡುವ ನಮಸ್ಕಾರ. ನಿಮ್ಮ ೩ನೆಯ ತಾರೀಖಿನ ಪತ್ರ ಇಲ್ಲಿಗೆ ೬ನೆಯ ತಾರೀಖಿನ ಸಂಜೆ ಮುಟ್ಟಿ ಆ ಬಗ್ಗೆ ಧನ್ಯವಾದಗಳು. ನೀವು ಒಳಿತೇನೇ ಮಾಡಿದ್ದೀರಿ. ನಿಮಗೆ ನಾನು ಕಳುಹಿಸುವುದಾದರೆ ನಿಮ್ಮ ಪತ್ರಿಕೆಯಲ್ಲಿ ನನ್ನ ಕವಿತೆ ಹೆಚ್ಚಿಗೆ ಜಾಗವನ್ನು ಕೊಳ್ಳಬಾರದಂತೆ, ಹೆಚ್ಚಾದರೆ ೨೦-೩೦ ಪಂಕ್ತಿಗಳೊಳಗಿನ ಕವಿತೆಯನ್ನು ಕಳುಹಿಸಿಕೊಡುತ್ತಿದ್ದೆ. ನೀವು ನನ್ನ 'ಮಾತಂಗಿ' ಎಂಬ ಉದ್ದ ಕವಿತೆಯನ್ನು ಆಯ್ದುಕೊಂಡುದು ನನ್ನ ಭಾಗ್ಯವೆನ್ನಬೇಕು. ನೀವು ಹಾಗೆ ಮಾಡಿಲ್ಲವಾದರೆ ನಿಮಗೋಸ್ಕರ ಇದಾದೀತೋ? ಅದಾದೀತೋ? ಎಂದು ಹುಡುಕಾಡಿ ಬಳಲಬೇಕಾಗಿತ್ತು. ಆ ಕಷ್ಟವನ್ನೆಲ್ಲಾ ನನಗೆ ಉಳಿಸಿಬಿಟ್ಟಿರಿ. ಆ ಬಗ್ಗೆ ಬಹಳ ಉಪಕಾರ, ಸ್ಮಾರಕ ಪತ್ರಿಕೆಗಳ ಪ್ರಪಂಚದಲ್ಲಿ ನಿಮ್ಮ ಪತ್ರಿಕೆ ಬಹಳ ಮೇಲ್ತರಗತಿಯದಾಗಿ ಹೆಸರುವಾಸಿಯಾಗುವಂತೆ ಶ್ರೀ ಪರಮಾತ್ಮನು ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತೇನೆ. ವಿಶೇಷವೇನಿಲ್ಲ.

ಇತಿ ನಮಸ್ಕಾರ

ನನ್ನ ಮಾತಂಗಿ ಎಂಬ ನನ್ನ ಕವಿತೆಯನ್ನು ನೀವು ಕಂಡಿತವಾಗಿ ಉಪಯೋಗಿಸಿಕೊಳ್ಳಬಹುದು.

೯೫

**ಅಮ್ಮೆಂಬಳ ಶಂಕರನಾರಾಯಣ ನಾವಡ** (ಕೋಟೆಕಾರು) ೧೨-೩-೬೦

ಗೋವಿಂದ ಪೈ ಮಾಡುವ ನಮಸ್ಕಾರ.

ನೀವು ಅತ್ಯಂತ ಪ್ರೀತಿಪೂರ್ವಕವಾಗಿ ಕಳುಹಿಸಿಕೊಟ್ಟಿರುವ 'ಮುದ್ದಣ ಮಹಾಕವಿಯ ಶ್ರೀ ರಾಮಾಶ್ವಮೇಧ ಕಥೆ' ಎಂಬ ನೀವು ರಚಿಸಿದ ಪುಸ್ತಕ ಇಲ್ಲಿಗೆ ಮುಟ್ಟಿ ಆ ಬಗ್ಗೆ ಅನೇಕ ಧನ್ಯವಾದಗಳು. ನಾಳೆ ನಾಡಿದು ಇದನ್ನು ನಾನು ಚಿ॥ ತಮ್ಮನ ಓದಿಕೆಯ ಬಗ್ಗೆ ಮಂಗಳೂರಿಗೆ ಕಳುಹಿಸಿಕೊಡುವೆನು. ಬಹಳ ಉಪಕಾರ....ನೀವು ಪ್ರೀತಿಪೂರ್ವಕವಾಗಿ ನನಗೆ ಕಳುಹಿಸಿರುವ 'ಉಪನಿಷತ್ತಿನ ಕಥೆಗಳು' ಎಂಬ ನಿಮ್ಮ ರಚನೆಯ ಪುಸ್ತಕವನ್ನು ಓದಿ ನೋಡಿದೆ. ನಿಮ್ಮ ಕನ್ನಡ ಅನುವಾದವನ್ನು ಇಷ್ಟು ಹೇಳಿದರೆ ಸಾಕು – ಬಹಳ ಚೊಕ್ಕವಾಗಿದೆ. ಬಹಳ ಸೊಗಸಾಗಿದೆ. ಕಿರಿಯರ ಮಾತ್ರವಲ್ಲ, ಹಿರಿಯರ ಓದಿಗೂ ತುಂಬಾ ತಕ್ಕಂತಿದ್ದು ಬಹಳ ಮೇಲಾಗಿದೆ; ಓದಿದವರು ಮೆಚ್ಚುವಂತಿದೆ. ನಿಮ್ಮನ್ನು ಮನವಾರೆ ಅಭಿನಂದಿಸುತ್ತೇನೆ. ಇನ್ನು ಮುಂದೆಯೂ ನೀವು ಬಹಳ ಮೇಲಾದ ಅನುವಾದಗಳನ್ನೂ ಸ್ವತಂತ್ರ ಗ್ರಂಥಗಳನ್ನೂ ರಚಿಸುತ್ತಿರುವಂತೆ ಶ್ರೀ ದೇವರು ನಿಮ್ಮಲ್ಲಿ

ಅನುಗ್ರಹಿಸಿ ನಿಮಗೆ ದೀರ್ಘಾಯುರಾರೋಗ್ಯವಿತ್ತು, ಉತ್ತರೋತ್ತರ ಅಭಿವೃದ್ಧಿ ಯಾಗಿಸಿ, ಸದಾ ಕಾಪಾಡುತ್ತಿರಲಿ ಎಂದು ಆತನಲ್ಲಿ ಪ್ರಾರ್ಥಿಸುತ್ತೇನೆ.

ಇತಿ ನಮಸ್ಕಾರ

೯೬

**ಕೆ. ವೆಂಕಟ್ರಾಯಾಚಾರ್** (ಸುರತ್ಕಲ್) ೧-೪-೬೦

ಗೋವಿಂದ ಪೈ ಮಾಡುವ ನಮಸ್ಕಾರ. ನಿಮ್ಮ 31/3ರ ಕಾರ್ಡು ನಿನ್ನೆ ಸಂಜೆ ಇಲ್ಲಿ ಕೈಸೇರಿ ಧನ್ಯವಾದಗಳು. ನವ್ಯ ಕವಿತೆ ಎಂದು ಬರೆಯಬೇಕಾಗಿದ್ದಲ್ಲಿ ಕೈತಪ್ಪಾಗಿ ನಾನು ಕನ್ಯಾಕವಿತೆ ಎಂದು ಬರೆದಿರುವೆನೆಲ್ಲಿ? ಅಲ್ಲಿ ಆ ಕನ್ಯಾಕವಿತೆ ಎಂಬ ಸಮಾನ ಪದವನ್ನು ಹೊಸತಾಗಿ ಸೃಷ್ಟಿಸಿ ತಾನೆ ಹಾಗೆ ಬರೆದಿರುತ್ತೇನೆ. ಕನ್ಯಾಕವಿತೆ ಎಂಬ ಸಮಾಸಕ್ಕೆ ನನ್ನ ಅರ್ಥ ಹೀಗಿದೆ. ಈ ಮುಂಚೆ ಬೇರೆ ಎಲ್ಲಿಯಾದರೂ ಒಮ್ಮೆ ಯಾದರೂ ಪ್ರಕಟವಾಗಿ ಪ್ರಕಾಶಕ್ಕೆ ಬಂದಿಲ್ಲದ ಬರಹಗಾರರ ಹಸ್ತಪ್ರತಿಯಲ್ಲೇ ಉಳ್ಳ ಕವಿತೆ ಎಂದು ಅಷ್ಟೆ. ಏಕೆಂದರೆ ಬೇರೆ ಕವಿತೆ ಸದ್ಯಸಾಲಕ್ಕೆ ನನ್ನೊಂದಿಗೆ ಇಲ್ಲ. ಆದರೆ ನಿಮ್ಮ ಪ್ರತ್ಯುತ್ತರದಲ್ಲಿ ನನ್ನ ಪ್ರಕಟವಾಗಿರುವ ಯಾವುದಾದರೊಂದು ತಕ್ಕಷ್ಟು ಉದ್ದವಾಗಿರುವ ಕವಿತೆಯನ್ನು ಕಳುಹಿಸಿಕೊಡಬೇಕೆಂದು ಸೂಚಿಸಿರುವುದ ರಿಂದ ಇದರೊಂದಿಗೆ ಮಡಗಿ ನನ್ನ "ಹುಲ್ಲುಕಟಿಗ" ಎಂಬೊಂದು ಬೌದ್ಧ ಧರ್ಮಗ್ರಂಥ ಗಳಿಂದ ಆಯ್ದುಕೊಂಡ ಆಖ್ಯಾಯಿಕೆಯೊಂದನ್ನು ಆಧರಿಸಿ ನಾನು ರಚಿಸಿದ ಕವಿತೆಯೊಂ ದನ್ನು ಕಳುಹಿಸಿಕೊಟ್ಟಿರುತ್ತೇನೆ. ಹಾಗೂ ಈ ಕವಿತೆ ನಿಮಗೆ ಮುಟ್ಟಿದೆಯೋ? ಇದು ನಿಮಗೆ ಒಪ್ಪಿಗೆಯಾಗುತ್ತದೋ? ಎಂದು ನನಗೆ ಬರೆದು ತಿಳಿಸುವರೆ ನನ್ನ ವಿಳಾಸ ಬರೆದಿರುವ ಒಂದು ಕಾರ್ಡನ್ನು ಇಟ್ಟಿರುತ್ತೇನೆ. ಇದು ನಿಮ್ಮ ಕೈಸೇರುತ್ತಲೇ ಒಂದು ಪಂಗ್ತಿಯನ್ನು ಬರೆದು ದಯಮಾಡಿ ನನಗೆ ತಿಳುಹಿಸಬೇಕಾಗಿ ಅಪೇಕ್ಷಿಸು ತ್ತೇನೆ.

ಇತಿ ನಮಸ್ಕಾರ

Enclosures :

(1) "ಹುಲ್ಲುಕಟಿಗ" ಎಂಬ ಒಂದು ಕವಿತೆ ಮತ್ತು
(2) ನಿಮ್ಮ ಜವಾಬಿನ ಬಗ್ಗೆ ನನ್ನ ಮೇಲು ವಿಳಾಸ ಬರೆದ ಒಂದು ಟಪ್ಪಾಲು ಕಾರ್ಡು.

P.S:—ಈಗ ನನಗೆ ಕೆಲದಿನಗಳ ಹಿಂದೆ ಆಗಿದ್ದ ಅಸೌಖ್ಯದಿಂದಾಗಿರುವ ಅಶಕ್ತಿಯ ಪ್ರಯುಕ್ತ ಈಗ ತಾನೆ ಹೊಸತೊಂದು ಪ್ರತಿಯನ್ನು ತೆಗೆಯಲಾರದೆ, ಕೆಲತಿಂಗಳ ಹಿಂದೊಮ್ಮೆ ತೆಗೆದೊಂದು ಪ್ರತಿಯನ್ನು ಕಳುಹಿಸಬೇಕಾಗಿದೆ. ದಯಮಾಡಿ ಕ್ಷಮಿಸುವುದು.

೯೭

**ಆರ್. ಎನ್. ಮೂರ್ತಿ** (ಪುಣೆ) ೮-೫-೧೯೬೦

ಗೋವಿಂದ ಪೈ ಮಾಡುವ ನಮಸ್ಕಾರ. ನಿಮ್ಮ ೫ನೆಯ ತಾರೀಖಿನ ಕಾರ್ಡು ಇವತ್ತು ಮುಟ್ಟಿತು. ಆ ಬಗ್ಗೆ ಧನ್ಯವಾದಗಳು.

೧) ದಿವಂಗತ ಶ್ರೀ ಬಿ. ವೆಂಕಟಾಚಾರ್ಯರ 'ದುರ್ಗೇಶ ನಂದಿನಿ' ಬಂಗಾಳಿಯಲ್ಲಿಯ ಶ್ರೀ ಬಂಕಿಂಚಂದ್ರ ಚಟರ್ಜಿಯವರ ಅದೇ ಹೆಸರಿನ ಬಂಗಾಳೀ ಕಾದಂಬರಿಯ ಕನ್ನಡ ಅನುವಾದ ತಾನೆ ವಿನಾ ಸ್ವತಂತ್ರ ಕನ್ನಡ ಕಾದಂಬರಿಯಲ್ಲ. ಅದಕ್ಕಿಂತ ಹಿಂದೆ "ಯಾದವ" ನೆಂಬೊಬ್ಬವನು ರಚಿಸಿದ "ಕಲಾವತೀ ಪರಿಣಯು' ಎಂಬ ಕನ್ನಡ ಗದ್ಯದಲ್ಲಿ (Prose) ರಚಿತವಾದೊಂದು 'ಕಲ್ಪಿತ ಕಥೆ' (novel) ಅಂದರೆ ಕಾದಂಬರಿ ಇದೆ. ಪ್ರಾಯಶಃ ಕನ್ನಡದಲ್ಲಿ ಇರುವ ಸ್ವತಂತ್ರವಾದ novel ಗಳಲ್ಲಿ ಮೊತ್ತಮೊದಲಿನ ಗ್ರಂಥ ಇದೇ ಎಂದು ನನಗೆ ತೋರುತ್ತದೆ. ಕನ್ನಡ ಕವಿಚರಿತ ಕಾರರು 'ಕಲಾವತೀ ಪರಿಣಯು'ದ ರಚನೆ ಕ್ರಿ.ಶ. ಸುಮಾರು ೧೮೦೦ರಲ್ಲಿ ಆಯಿತೆಂದಿ ರುತ್ತಾರೆ. (ಕರ್ಣಾಟಕ ಕವಿಚರಿತೆ vol. III ಪುಟ ೧೫೭–೧೫೯). ಆದರೆ 'ಕಲಾ ವತೀ ಪರಿಣಯು' ಪ್ರಾಯಿಕವಾಗಿ ಹಳಗನ್ನಡ ಸರಣಿಯಲ್ಲಿ ಬರೆದಿದೆ. (ಕರ್ಣಾಟಕ ಕವಿಚರಿತೆ, vol. III ಪು. ೧೫೮). ಇಂದಿನ ನಮ್ಮ ಹೊಸಗನ್ನಡದಲ್ಲಿ ರಚಿತ ವಾಗಿರುವ ಕಾದಂಬರಿಗಳಲ್ಲಿ ಮೊತ್ತ ಮೊದಲಿನ ಗ್ರಂಥವಾದರೆ ಗುಲವಾಡಿ ವೆಂಕಟ ರಾಯರು ಎಂಬ ನಮ್ಮ ದಕ್ಷಿಣ ಕನ್ನಡ ಜಿಲ್ಲೆಯ ರಚಕರು ಕ್ರಿ.ಶ. ೧೮೯೯ರಲ್ಲಿ ಬರೆದ "ಇಂದಿರಾಬಾಯಿ" ಎಂಬ ಕಾದಂಬರಿ...ಅದೊಂದು ಸಾಮಾಜಿಕ (Social) ಕಥೆಯನ್ನು ಒಳಕೊಂಡದೆ. ಅದು ಈಗಲೂ ಮಾದರಿಯ novel ತಾನೆ.

೨) ಕಾದಂಬರಿ ಅಥವಾ novel ಎಂಬ ಸಾಹಿತ್ಯ ವಿಭಾಗದಲ್ಲಿ ಆಂಗ್ಲ ಸಾಹಿತ್ಯ ದಲ್ಲಿಯ ಮೊತ್ತಮೊದಲಿನ novelist ಎಂದರೆ Henry Fielding (ಕ್ರಿ.ಶ. ೧೭೦೭–೧೭೫೪) ಎಂಬವನು. ಅವನ ಮುಖ್ಯ ಕಾದಂಬರಿಗಳು (1) Joseph Andrews (೧೭೪೨), (2) Tom Jones (೧೭೪೯) (3) Amelia (೧೭೫೨),

೩) ಆದರೆ Europe ಭೂಖಂಡದಲ್ಲಿಯ ಪ್ರಥಮ novelist ಎಂಬುವನು Italy ದೇಶದ Giovanni Boccaccio (ಕ್ರಿ.ಶ. ೧೩೧೩-೧೩೭೫). ಅವನ ಕೃತಿ Decameron ಎಂದು. ಅದು ಆಂಗ್ಲಭಾಷೆಯಲ್ಲಿ ಭಾಷಾಂತರವಾಗಿದೆ. ಆದರೆ ಇವರೆಲ್ಲರಿಗಿಂತ ಎಷ್ಟೋ ಹಿಂದಣ ಕ್ರಿ.ಶ. ೬-೭ನೆಯ ಶತಮಾನಗಳಲ್ಲಿ ಆಗಿಹೋದ ಬಾಣಭಟ್ಟನೆಂಬವನು ಸಂಸ್ಕೃತದಲ್ಲಿ ರಚಿಸಿದ 'ಕಾದಂಬರಿ' ಎಂಬ ಹೆಸರಿನದೇ ಕಾದಂಬರಿ ಪ್ರಾಯಶಃ ಸಂಸ್ಕೃತದಲ್ಲಿನ ಮೊತ್ತ ಮೊದಲಿನ ಕಾದಂಬರಿಯಂತೆ. ಆ ಕಾರಣದಿಂದಲೇ ಆ ಬಳಿಕ ನಮ್ಮ ಭಾರತಭೂಮಿಯಲ್ಲಿ ಬರೆಯಲ್ಪಟ್ಟ ಕಾದಂಬರಿ ಗಳಿಗೆಲ್ಲಾ 'ಕಾದಂಬರಿಗಳು' ಎಂದು ಹೆಸರಾಯಿತು.

೪) ಮಹಾರಾಷ್ಟ್ರ ಭಾಷೆಯಲ್ಲಿಯ ಹಳೆಯ ಸಾಹಿತ್ಯವನ್ನು ಮಾತ್ರ ನಾನು ನೋಡಿ ರುವೆನಲ್ಲದೆ (ಉದಾ – ಜ್ಞಾನದೇವ, ರಾಮದಾಸಸ್ವಾಮಿ, ತುಕಾರಾಮ ಮೊದಲಾದ ವರು) ಈಗಿನ ಆಧುನಿಕ ಸಾಹಿತ್ಯದಲ್ಲಿ ನಾನು ಓದಿರುವುದೆಂದರೆ ಹರಿ ನಾರಾಯಣ ಆಪ್ಟೆ ಮೊದಲಾದವರ ಕೆಲವು ಕಾದಂಬರಿಗಳನ್ನು ತಾನೆ. ಅವನ್ನು ೩೦-೪೦ ವರ್ಷ ಗಳಿಗಿಂತ ಹಿಂದೆ... × ...ಅದಕ್ಕಿಂತ ಈಚೆಯ ಮಹಾರಾಷ್ಟ್ರದ ಆಧುನಿಕ ಯಾವ



ಪತ್ರಗಳು ಚಿತ್ರಿಸಿದ

ಗ್ರಂಥವನ್ನೂ ಓದಿಲ್ಲ. ಆಧುನಿಕ ಯಾವ ಲೇಖಕರ ಹೆಸರುಗಳೂ ಗೊತ್ತಿಲ್ಲ, ದಯ ಮಾಡಿ ಕ್ಷಮಿಸುವುದು.

ಇತಿ ನಮಸ್ಕಾರ

P.S. ಕೆಲ ದಿನಗಳ ಹಿಂದೆ ನನಗಿದ್ದ ಅಸೌಖ್ಯದಿಂದ ಏಳುತ್ತಿರುವೆ. ಅದಾಗಿ ಈ ಪತ್ರದಲ್ಲಿ ಎಷ್ಟೋ ಕೈತಪ್ಪುಗಳು ಅನಿವಾರ್ಯವಾಗಿ ಆಗಿ ಹೋಗಿವೆ. ಬಹಳ ಉಪಕಾರ.

ಟಿಪ್ಪಣಿ : ಪೈಗಳು ೧೯೫೦ರ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಭಾಷಣದಲ್ಲಿ ಕನ್ನಡದ ಪ್ರಥಮ ಕಾದಂಬರಿಯೆಂದು 'ಕಲಾವತೀ ಪರಿಣಯ'ವನ್ನು ಪ್ರಸ್ತಾಪಿಸಿ ದಾಗಿನಿಂದ ಪತ್ರಿಕೆಗಳಲ್ಲಿ ಈ ಕುರಿತು ಪ್ರತಿಕ್ರಿಯೆಗಳು ಬರತೊಡಗಿದುವು. ಶ್ರೀಮೂರ್ತಿ ಯವರು ತಮ್ಮಲ್ಲಿದ್ದ, ಬಿ. ವೆಂಕಟಾಚಾರ್ಯರಿಂದ ಅನುವಾದಗೊಂಡ 'ದುರ್ಗೇಶ ನಂದಿನಿ' (೧೮೭೫) ಯನ್ನು ಗಮನಿಸಿ 'ಆಧುನಿಕ ಸ್ವರೂಪದ' ಮೊದಲ ಕಾದಂಬರಿ ಇದೇ ಆಗಿರಬೇಕಲ್ಲವೆ – ಎಂದು ಮುಂತಾಗಿ ಪ್ರತಿಕ್ರಿಯಿಸಿದ ಪತ್ರಕ್ಕೆ ಇದು ಉತ್ತರ.

೯೮

**ಸಮೇತನಹಳ್ಳಿ ರಾಮರಾಯ** (ಬೆಂಗಳೂರು) ೯-೯-೧೯೬೦

ಗೋವಿಂದ ಪೈ ಮಾಡುವ ನಮಸ್ಕಾರ. ನೀವು ಪ್ರೀತಿಪೂರ್ವಕವಾಗಿ ಕಳುಹಿಸಿ ಕೊಟ್ಟಿರುವ ನಿಮ್ಮ 'ಕಲಾರಾಧನೆ' ಎಂಬ 5 ನಾಟಕಗಳ ಗೊಂಚಲಿನ ಪುಸ್ತಕವು ಇದೇ ಕಳೆದ ಮೇ ತಿಂಗಳ ಒಂದನೆಯ ವಾರದಲ್ಲಿ ಇಲ್ಲಿ ಕೈ ಸೇರಿ, ಆ ಬಗ್ಗೆ ಅನೇಕ ಧನ್ಯವಾದಗಳು. ಆದರೂ ಈವರೆಗೆ ಅದನ್ನು ಕುರಿತು ನಿಮಗೆ ಬರೆಯದಿರಲು ಕಾರಣವೆಂದರೆ ನನಗಾಗಿದ್ದ ಒಂದು ವಾರದ ಅಸೌಖ್ಯ ಮತ್ತು ಅದರಿಂದ ವಯಸ್ಸಿಗೆ ಅನುಗುಣವಾಗಿ ಉಂಟಾದ ಅಶಕ್ತಿ. ದಯಮಾಡಿ ಕ್ಷಮಿಸುವುದು. ಈಗ ಕೊಂಚ ತೆಪ್ಪಗಿರುವೆನೆಂದು ನಿಮಗೀ ಪತ್ರವನ್ನು ಬರೆಯುತ್ತೇನೆ.

ನಿಮ್ಮ ಪುಸ್ತಕವನ್ನು ಓದಿ ನೋಡಿದೆ. ನಾಟಕಗಳೆಲ್ಲ ಒಂದಕ್ಕಿಂತ ಒಂದು ಚಲೋ ದಾಗಿದೆ. ಓದಲಿಕ್ಕೆ ಹೇಗೂ ಬಹಳ ಚೆನ್ನಾಗಿವೆಯಷ್ಟೇ. ಆಯಾ ಸಮಾರಂಭ ಗಳಲ್ಲಿ ಆಡಿಸಲಿಕ್ಕೂ ರೇಡಿಯೋದಲ್ಲಿ ನುಡಿಸಲಿಕ್ಕೂ ಬಹಳ ಲೇಸಾಗಿದೆ. ನಿಮ್ಮನ್ನು ಮನಸಾರೆ ಅಭಿನಂದಿಸುತ್ತೇನೆ. ನಿಮ್ಮ ಪುಸ್ತಕದ ಅಕ್ಷರಿಕೆ (Spelling) ಯಲ್ಲಿ ಪ್ರಾಯಶಃ ಕಣ್ಮರವೆಯಿಂದೇನೋ ಆಗಿರಬೇಕಾದ ಇವೊಂದೆರಡು ಹುಳುಕುಗಳನ್ನು ನಿಮ್ಮ ಗಮನಕ್ಕೆ ತರುತ್ತೇನೆ. (1) ಪುಟ ೨೦ "ಬುದ್ಧಂ ಸರಣಂ ಗಚ್ಛಾಮಿ" ಎಂದು ಮೊದಲಾಗುವ ಆ ಮೂರು (3) ಪಂಕ್ತಿಗಳು ಸಂಸ್ಕೃತ ಭಾಷೆಯವಲ್ಲ. ಪಾಲಿಭಾಷೆಯಲ್ಲಿವೆ ಎಂಬುದು 'ಶರಣಂ' ಎಂಬ ಸಂಸ್ಕೃತ ಉಪಯೋಗಿಸದೆ (ಬೌದ್ಧಗ್ರಂಥಗಳಲ್ಲಿ ಉಪಯೋಗಿಸಲ್ಪಟ್ಟಿರುವ) ಪಾಲಿ

ಭಾಷೆಯ 'ಸರಣಂ' ಎಂದಿರುವುದರಿಂದ ಕಂಡಿತವಾಗುತ್ತದೆ. ಅತ ಏವ ಆ ಮೂರರ ನಡುವಣ "ಧರ್ಮಂ" ಎಂಬ ಸಂಸ್ಕೃತ ಶಬ್ದವನ್ನು ಉಪಯೋಗಿಸಿದುದು ಸರಿಯಲ್ಲ, ತೀರಾ ಅನುಚಿತ. ಆ ಪಂಕ್ತಿ ನೇರಾಗಿ "ಧಮ್ಮಂ ಸರಣಂ ಗಚ್ಛಾಮಿ" ಎಂದಿರಬೇಕು. ಅಷ್ಟೇ. ಪುಟ 66 – ' ಮಧ್ಯಾಸ್ನ ' ಎಂದಿದೆ. 'ಮಧ್ಯಾಹ್ನ' ಎಂದಾಗಬೇಕು.

ಇತಿ ನಮಸ್ಕಾರ

೯೯

**ಪಾದೂರು ಗುರುರಾಜ ಭಟ್ಟ (ಉಡುಪಿ)** ೨೭-೯-೬೦

ಗೋವಿಂದ ಪೈ ಮಾಡುವ ನಮಸ್ಕಾರ. ನಿಮ್ಮ ಪತ್ರ ಮುಟ್ಟಿದೆ. ಅದನ್ನು ಎಲ್ಲಿ ಇಟ್ಟುಬಿಟ್ಟೆನೋ ಕಾಣೆ. ಹೇಗೂ ಅದರಲ್ಲಿಯ ವಿಷಯ ತಕ್ಕಷ್ಟಾದರೂ ನೆನಪಿನಲ್ಲಿದೆ. ನಿಮ್ಮ ಪರೀಕ್ಷೆಯ ಬಗ್ಗೆ ಇನ್ನು ಯಾವೆಲ್ಲ ಪುಸ್ತಕಗಳನ್ನು ಓದಬೇಕೆಂದು ಕೇಳಿರುವಂತೆ ತೋರುತ್ತದೆ. ಅದು ಸರಿಯೆಂದಾದರೆ, ಕೆಲವು ಹಪ್ತೆಗಳ ಹಿಂದೆ ನೀವು ಇಲ್ಲಿಗೆ ಬಂದಿದ್ದಾಗ ನಾನು ಯಾವೆಲ್ಲ ವಿಷಯಗಳನ್ನು ಸಂಗ್ರಹಿಸಬೇಕೆಂದೂ ಮುಖಾಮುಖಿಯಾಗಿ ಹೇಳಿದ್ದೆನೋ, ನೀವು ಅದನ್ನೆಲ್ಲ ಬರಕೊಂಡು ಹೋಗಿದ್ದಿರೋ, ಅವಷ್ಟೇ ವಿನಾ ಅವಕ್ಕೆ ಹೊರಗಣ ಯಾವೊಂದು ವಿಷಯವಾಗಲಿ, ಯಾವೊಂದು ಪುಸ್ತಕದ ಹೆಸರಾಗಲಿ ಈಗ ಮನಸ್ಸಿಗೆ ಗೋಚರಿಸದು. ಅದನ್ನು ಮಿಕ್ಕು ಒಂದು ಎಳ್ಳನ್ನು ಕೂಡಿಸಿಡಲಿಕ್ಕೆ ನನಗೆ ಬಾರದು. ಅಷ್ಟೇ.

ನೀವು ಕಯ್ಕೊಂಡಿರುವ ಈ ಸತ್ಕಾರ್ಯದಲ್ಲಿ ಜಯಶೀಲರಾಗುವಂತೆ ನೀವೀಗ ಪಡುತ್ತಿರುವ ಪರಿಶ್ರಮದಲ್ಲಿ ಶ್ರೀ ಪರಮಾತ್ಮನು ನಿಮಗೆ ಅಹರ್ನಿಶಿ ನೆರವಾಗಿ ನಿತ್ತು, ನಿಮ್ಮ ಎಣಿಕೆಗೆ ಮಿಕ್ಕು ನೀವು ತುಂಬ ಯಶಸ್ವಿಯಾಗಿ ತ್ಯೋರಿ ಬರುವಂತೆಯೂ, ನಿಮ್ಮ ಮನೋರಥವು ಸಾಕಲ್ಯವಾಗಿ ಕೆಯ್ಗೂಡುವಂತೆಯೂ ದಯೆದೋರಿ ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತೇನೆ.

ಇತಿ ಶಮ್

ಮರು ಬರೆಹ – ಇದನ್ನು ಬರೆದು ಮುಗಿಸಿದ 1-2 ತಾಸುಗಳಲ್ಲಿ, ಹೇಗೂ ಇದನ್ನು ಮಡಚಿ ಟಪ್ಪಾಲಿಗೆ ಕಳುಹಿಸಿಕೊಡುವಷ್ಟರಲ್ಲಿ ನಿಮ್ಮ ಸಪ್ಟಂಬರ 9ನೆಯ ತಾರೀಖಿನ ಕಾರ್ಡು ದೊರಕಿತು. ಆ ಕಾರ್ಡಿಗೆ ತಾನೆ ಪ್ರತ್ಯುತ್ತರ ಈ ಪತ್ರ. ನಿಮ್ಮ ಕಾರ್ಡು ಗೈರುವಿಲೆಯಾದ ಕಾರಣವೇ ಅದನ್ನು ಹುಡುಕಾಡಿ ದೊರಕಿಸಿಕೊಂಡ ಮೇಲೆ ಪ್ರತ್ಯುತ್ತರ ಬರೆಯೋಣವೆಂದು ಬಾಕಿ ಇಟ್ಟೆ. ಕಡೆಗೆ ಇಷ್ಟುದಿನಗಳಿಗೂ ಪ್ರತ್ಯುರಿಸಲಿಲ್ಲವೆಂದು ನಾಚಿಕೆಯಾಗಿ ಈ ಪತ್ರವನ್ನು ಬರೆದೆ, ಇದನ್ನು ಮುಗಿಸುವ ಕೊಂಚ ಹೊತ್ತಿನಲ್ಲೇ ನಿಮ್ಮ ಕಾರ್ಡು ದೊರೆಯಿತು.

೧೦೦

**ಪ. ನಾಗರಾಜಯ್ಯ** (ಹಾಸನ) ೨೩-೨-೬೧

ಗೋವಿಂದ ಪೈ ಮಾಡುವ ನಮಸ್ಕಾರ. ನಿಮ್ಮ ಆಮಂತ್ರಣ ಪತ್ರಿಕೆ ಇವತ್ತು ಇಲ್ಲಿಗೆ ಮುಟ್ಟಿ ಆ ಬಗ್ಗೆ ಧನ್ಯವಾದಗಳು. ನಾಡದು ೨೫ನೆಯ ತಾರೀಕಿನಂದು ನಿಮ್ಮ ಶಾಲೆಯ ವಿದ್ಯಾರ್ಥಿ ಸಂಘದವರು ಜರಗಸಲಿಕ್ಕೆ ಕಯ್ಕೊಂಡಿರುವ ಶ್ರೀ ಮಹಾಕವಿ ಕುವೆಂಪುರವರ ಭಾವಚಿತ್ರದ ಅನಾವರಣ ಮಹೋತ್ಸವವು ಬಹಳ ಯಶಸ್ವಿಯಾಗಿ ನೆರವೇರುವಂತೆ ಶ್ರೀ ಪರಮಾತ್ಮನು ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತೇನೆ.

ಇತಿ ನಮಸ್ಕಾರ

೧೦೧

**ಎನ್. ಶೇಷಗಿರಿ ಪೈ** (ಮಂಗಳೂರು) ೨೧-೪-೪೬

**ಅಭಿಪ್ರಾಯ**

ನಿಮ್ಮ ಳಳ ಕವನಗಳು ಚೆನ್ನಾಗಿವೆ. ಅವು ಕಿರಿಯರ ಶಾಲೆಗಳಲ್ಲಿ ಕಲಿಸತಕ್ಕಂತಿವೆ. ಆ ಬಗ್ಗೆ ನಿಮ್ಮನ್ನು ಅಭಿನಂದಿಸುತ್ತೇನೆ. ಮತ್ತಿನ ಜಾನಪದ ಗೀತಗಳನ್ನು ಸಂಗ್ರಹೆ ಎಂದಿರುವುದರಿಂದ ಅವನ್ನು ಅಲ್ಲಲ್ಲಿಯ ಹಳ್ಳಿಗಳಿಂದ ಆಯ್ದುಕೊಂಡಿರಬೇಕು. ಅವೂ ಬಹಳ ಚೆನ್ನಾಗಿವೆ. ಅಭಿನಂದಿಸುತ್ತೇನೆ.

ಇತಿ ನಮಸ್ಕಾರ

೧೦೨

**ಎನ್. ಶೇಷಗಿರಿ ಪೈ** (ಮಂಗಳೂರು) ೨೨-೪-೬೧

ಗೋವಿಂದ ಪೈ ಮಾಡುವ ನಮಸ್ಕಾರ. ನಿಮ್ಮ ಹಸ್ತಪ್ರತಿಯನ್ನು ಓದಿನೋಡಿ ಮುಗಿಸಿರುತ್ತೇನೆ. ನಾಡದು ೨೫ ಅಥವಾ ೨೬ನೆಯ ತಾರೀಕಿನಂದು ನಿಮಗೆ ಬಿಡು ವಿದ್ದಾಗ ಅಥವಾ ಯಾವದೊಂದು ಆದಿತ್ಯವಾರದಂದು ಬಿಡುವು ದೊರೆತಾಗ ನೀವು ಇಲ್ಲಿಗೆ ಬಂದರೆ, ನಾನು ಅದರಲ್ಲಿ ಅಲ್ಲಲ್ಲಿ ತಿದ್ದಿರುವುದನ್ನು ಯಾವ ಬಗ್ಗೆ ಎಂದು ತಿಳಿಸಲಿಕ್ಕಾಗುತ್ತದೆ.

ಇತಿ ನಮಸ್ಕಾರ

೧೦೩

**ಬೈಕಾಡಿ ವೆಂಕಟಕೃಷ್ಣ ರಾವ** (ಬ್ರಹ್ಮಾವರ) ೧೪-೭-೬೧

ಗೋವಿಂದ ಪೈ ಮಾಡುವ ನಮಸ್ಕಾರ. ನಿಮ್ಮ ಜುಲಾಯಿ ೪ನೆಯ ತಾರೀಕಿನ ಪತ್ರ ಇಲ್ಲಿಗೆ ೫ನೆಯ ತಾರೀಕಿನಂದು ಮುಟ್ಟುವಾಗ, ಅದಕ್ಕೆ ಕೆಲ ಹಪ್ತೆಗಳ

ಮುಂಚಿನಿಂದಲೇ ನನ್ನ ಬಲತೋಳಿನಲ್ಲಿ ಉಂಟಾಗಿದ್ದ ದಾರುಣವಾದ ವೇದನೆಯಿಂದ ನಾನು ಇನ್ನೂ ಈಚೆಯ ತಡಿ ಸೇರಿಲ್ಲದೆ, ನನ್ನ ಬಲಕೈಯಿಂದ ಬರೆಯಲಿಕ್ಕೆ ಆಗುತ್ತಿರಲಿಲ್ಲ. ಬಹಳ ಕಷ್ಟವಾಗುತ್ತಿತ್ತು. ಆದರೆ ನಡುನಡುವೆ ನಾನು ಪ್ರಯತ್ನಪೂರ್ವಕವಾಗಿ ಆ ಕೈಯನ್ನು ಬರೆಯಲಿಕ್ಕೆ ಆಗಾಗ ಉಪಯೋಗಿಸಿಕೊಳ್ಳುತ್ತಿದ್ದು. ಇತ್ತೀಗ ಸ್ವಲ್ಪ ಸ್ವಲ್ಪ ಬರೆಯಲಿಕ್ಕೆ ಆಗುತ್ತದೆ. ಅದಾಗಿ ನಿಮ್ಮ ಪತ್ರಕ್ಕೆ ಪ್ರತ್ಯುತ್ತರಿಸಲಿಕ್ಕೆ ಇಷ್ಟು ತಡವಾಗಬೇಕಾಯಿತು. ದಯಮಾಡಿ ಕ್ಷಮಿಸುವುದು.

ಆ ಪತ್ರದಲ್ಲಿ ನಿಮ್ಮತ್ತಣ ಬ್ರಹ್ಮಾವರದ ಕರ್ನಾಟಕ ಸಂಘದ ಈವಂದಿನ ನಾಡಹಬ್ಬದ ಪ್ರಯುಕ್ತ ನಮ್ಮ "ಆಜಪುರ" ಎಂಬುದೊಂದು ಹೊತ್ತಿಗೆಯನ್ನು ನೀವು ಹೊರವಡಿಸಲಿಕ್ಕೆ ಕೈಯ್ಕೊಂಡಿರುತ್ತೀರಿ. ಮಾತ್ರವಲ್ಲ. ಅದನ್ನು ನನಗೆ ಅರ್ಪಿಸಬೇಕೆಂದು ನಿರ್ಧರಿಸಿಯೂ ಇರುತ್ತೀರಿ ಎಂದು ಬರೆದುದನ್ನು ಓದಿ ನೋಡಿ ನನಗೊಮ್ಮೆ ಗಾಬರಿಯಾಯಿತು, ಅಲ್ಲವಾದರೆ ಸೋಜಿಗವಾದರೂ ಆಯಿತು. ನನಗೆ ಅರ್ಪಣೆ? ಯಾವ ಬಗ್ಗೆಯಂತೆ? ನಿಮಗೇ ಬರೆದು ನೋಡೋಣ ಎನ್ನುವಷ್ಟರಲ್ಲಿ ನನ್ನ ಕೈಯ ನೋವಿನಿಂದಾಗಿ ಆ ಕೆಲಸವನ್ನು ಈವರೆಗೆ ಮುಂದಕ್ಕೆ ತಳ್ಳಬೇಕಾಯಿತು .... ನನ್ನನ್ನು ಹಾಗೆ ಸತ್ಕರಿಸಬೇಕೆಂಬ ನಿಮ್ಮ ಯೋಜನೆ ಅಲ್ಲೀ ನಿಲ್ಲಲಿಲ್ಲ. ನನ್ನೊಂದಿಗೆ ಮುಂಚಿತವಾಗಿ ಒಂದೇ ಒಂದು ಮಾತನ್ನಾದರೂ ಕೇಳದೆ ಆ ವಿಷಯವಾಗಿ ಅಚ್ಚಾಗಿಸಿದ ಕಾರ್ಡುಗಳನ್ನು ಹೊರವಡಿಸಿದಿರಿ. ಅದೂ ಸಾಲದೆ ಇದೇ ಮೊನ್ನೆ ಜುಲಾಯಿ ೧೧ನೆಯ ತಾರೀಕಿನ ಮಂಗಳೂರಿನ ದೈನಿಕ "ನವಭಾರತ"ದಲ್ಲಿ ನೀವು ಹೊರಡಿಸಿಲಿಕ್ಕಿರುವ ಆ ಗ್ರಂಥವನ್ನು ನನಗೆ ಅರ್ಪಿಸುವ ನಿರ್ಧಾರವನ್ನು ಕೂಡಾ ಕಯ್ಕೊಂಡಿರುವಿರಿ ಎಂದು ಮತ್ತೊಂದು ಬಂದೂಕನ್ನು ಹಾರಿಸಿರುತ್ತೀರಿ.

ಆದರೆ ಸ್ವಾಮಿ, ಒಂದು ಕಡೆ ಯಾವ ಗೌರವವೂ ನನಗೆ ಬೇಡವೆಂದು ನನ್ನಷ್ಟಕ್ಕೆ ಸುಮ್ಮನಿರುವ ನನ್ನ ಅನಪೇಕ್ಷೆ. ಮತ್ತೊಂದು ಕಡೆ ಈ ಯೋಜನೆಯಲ್ಲಿ ಇಷ್ಟರೊಳಗೆ ನೀವು ಎಷ್ಟು ಮುಂದಕ್ಕೆ ಸಾಗಿರಬೇಕು? ಈಗ ನಿಮ್ಮನ್ನು ನಾನು ಹಿಮ್ಮೆಟ್ಟಿಸುವೆನಾದರೆ ನೀವು ಎಷ್ಟು ತ್ರಾಸ ಹೊಂದಬೇಕು?, ಎಂದು ಮನಗುಂದಿಸುವ ಚಿಂತೆ, ಇವೆರಡರ ಬಿಕ್ಕಟ್ಟಿನಿಂದ ಹೊಮ್ಮುವರೆ ಬಳಿತೋರದೆ ನಿರುಪಾಯನಾಗಿ, ಗತ್ಯಂತರವಿಲ್ಲದೆ ಹೀಗೆನ್ನುತ್ತೇನೆ - ನೀವು ನನಗೆ ಮಾಡಲೆಳಸುವ ಗ್ರಂಥಾರ್ಪಣವನ್ನು ನಾನು ಒಪ್ಪಿಕೊಳ್ಳುತ್ತೇನೆ.

ನೀವು ನನ್ನದೊಂದು ಕವಿತೆಯನ್ನು ಕಳುಹಿಸಬೇಕೆಂದಿರುತ್ತೀರಿ. ಆ ಮೇರೆಗೆ ಇದರೊಂದಿಗೆ ಇರಿಸಿ 14 ಪಂಗ್ತಿಯ "ಏಕನಾಥನೂ, ಕತ್ತೆಯೂ" ಎಂಬ ನನ್ನದೊಂದು ಚಿಕ್ಕ ಕವಿತೆಯನ್ನು ಕಳುಹಿಸಿರುತ್ತೇನೆ. ಆದರೆ ನೋಡಿ, ನನಗೆ ಅರ್ಪಿಸಬೇಕೆಂದಿರುವ ಗ್ರಂಥದಲ್ಲಿ ನನ್ನದೇ ಒಂದು ಕವಿತೆ ಇದ್ದರೆ ಅದು ಸರಿ ಎನಿಸೀತೇ? ಎಂದು ವಿಚಾರಿಸಿ ನೋಡಿ. ಸರಿ ಎಂದು ಒಪ್ಪಿದರೆ ಮಾತ್ರ ಇದನ್ನು ಉಪಯೋಗಿಸಿಕೊಳ್ಳಿ. ಇನ್ನೊಂದು ಮಾತೆಂದರೆ, ನನ್ನ ಈಗಣ ಇಳಿಪ್ರಾಯದ ಅಶಕ್ತತೆಯಲ್ಲಿ

ಹೊಸ ಕವಿತೆಯನ್ನು ಬರೆಯುವುದೆಂದರೆ ಸುಲಭವಲ್ಲ. ಅದಾಗಿ ಒಮ್ಮೆ ಪ್ರಕಟ
ವಾಗಿದ್ದ ಕವಿತೆಯನ್ನೇ ಕಳುಹಿಸಬೇಕಾಗಿ ಹಾಗೆ ಮಾಡಿರುತ್ತೇನೆ. ಬೇಡವೆಂದಾದರೆ
ಅದನ್ನು ದಯಮಾಡಿ ನನಗೆ ಮರಳಿ ಕಳುಹಿಸುವ ಉಪಕಾರ ಮಾಡಿರಿ. ಇತರತ್ರ
ಕಳುಹಿಸಲಿಕ್ಕೆ ನನಗೆ ನೆರವಾದೀತು. ಏನೂ ಅಡ್ಡಿ ಇಲ್ಲ. ಬೇಡವಾದರೆ ಮರಳಿ
ಕಳುಹಿಸಿ ಕೊಡಿರಿ.

ಇತಿ ನಮಸ್ಕಾರ

೧೦೪

**ರಾಮಚಂದ್ರ ಉಚ್ಚಿಲ್** (ಮುಂಬಯಿ) ೧೯-೭-೬೧

ಗೋವಿಂದ ಪೈ ಮಾಡುವ ನಮಸ್ಕಾರ. ಜೂನ್ ೨೩ನೆಯ ತಾರೀಕಿನ ಪತ್ರ
ಮುಟ್ಟಿದೆ. ಆದರೆ ಮಾಡಲೇನು? ಈಗಣ ೭೭ನೆಯ ವರ್ಷಕ್ಕೆ ಸಹಜವಾದ
ಅಶಕ್ತಿಯಿಂದ ನಿಮ್ಮ ಪತ್ರದಲ್ಲಿ ಕೇಳಿರುವಂಥಾ ಕ್ಲಿಷ್ಟವಾದ ಪ್ರಶ್ನೆಗಳನ್ನು ಪ್ರತ್ಯುತ್ತರಿ
ಸಲಾಗುವುದಿಲ್ಲ. ಸರ್ವಥಾ ಶಕ್ಯವಿಲ್ಲ. ಅದರಲ್ಲೂ ನನ್ನ ಭುಜಬಲದಲ್ಲಿ ಕೆಲವು
ತಿಂಗಳಿಂದ ಉಂಟಾದ ದಾರುಣವಾದೊಂದು ವೇದನೆಯಿಂದ ಬಲ ಕೈಯಿಂದ ಬೇಕಾ
ದಂತೆ ಬೇಕಾದಷ್ಟು ಬರೆಯಲಾಗದು. ಇದಷ್ಟೂ ಸಾಲದ ನೀವು ಹೆಸರಿಸಿರುವ
ಪುಸ್ತಕಗಳಲ್ಲಿ ನನ್ನೊಂದಿಗಿದ್ದುದನ್ನೇ (ಮೈಸೂರಿನಲ್ಲಿ ಇತ್ತೀಚೆಗೆ ಪ್ರಕಟವಾದ ಎರಡು
ರೂಪಾಯಿಗಳ, ಕುಮಾರವ್ಯಾಸನ ಭಾರತ ದ ಪ್ರತಿಯನ್ನು) ನಾನು ಕ್ರಯಕ್ಕೆ
ಪಡಕೊಳ್ಳಲಿಲ್ಲ. ಅದು ನನ್ನೊಂದಿಗಿಲ್ಲ. ಒಂದೂ ಬಿಡದೆ ಎಲ್ಲವನ್ನೂ ಅವರವರಿಗೆಲ್ಲಾ
ಹಂಚಿ ಮುಗಿಸಿರುತ್ತೇನೆ. ಈಗ ಒಂದೂ ನನ್ನೊಂದಿಗಿಲ್ಲ, ಮಾತ್ರವಲ್ಲ, ನಾನವನ್ನು
ಇನ್ನು ಎರವಲಾಗಿ ತರಿಸಿಕೊಳ್ಳುವಂತೆಯೂ ಇಲ್ಲ. ಅದಾಗಿ ನೀವು ಕೇಳಿದ ಪ್ರಶ್ನೆ
ಗಳಿಗೆ ಪ್ರತ್ಯುತ್ತರಿಸಲಾರೆನೆಂದು ಸವಿಷಾದವಾಗಿ ಹೇಳುತ್ತೇನೆ. ದಯಮಾಡಿ
ಕ್ಷಮಿಸುವುದು. ಇನ್ನು ಇಂಥಾ ವಿಷಯಗಳಲ್ಲಿ ದಯಮಾಡಿ ಬರೆಯಬಾರದೆಂದು
ವಿನಂತಿಸುತ್ತೇನೆ.

ನಿಮ್ಮ ಪತ್ರದ ಜತೆಯಲ್ಲಿ 'ಕಡಲ ಕರೆಯ ಚಿತ್ರಗಳು' ಎಂಬ ನಿಮ್ಮದೊಂದು ಪುಸ್ತಕ
ವನ್ನು ಕಳುಹಿಸಿರುವಿರೆಂದು ಬರೆದಿರುತ್ತೀರಿ. ಆ ಪುಸ್ತಕ ಇಲ್ಲಿಗೆ ಬಂದಿರುವಂತೆ
ನನ್ನ ನೆನಪಿಗೆ ತೋರುವುದಿಲ್ಲ. ಆದರೂ ನಾನು ಹುಡುಕಾಡಿ ನೋಡಿ ದೊರೆತರೆ
ನಿಮಗೆ ತಿಳುಹಿಸುತ್ತೇನೆ. ಆದರೆ ಅದು ದೊರೆತರೂ ನಾನದನ್ನು ಓದಲಾರೆ.
ಏಕೆಂದರೆ ಈ ಇಳಿಪ್ರಾಯದಲ್ಲಿ, ಈಗಣ ಅಶಕ್ತಿಯಲ್ಲಿ ನನಗದನ್ನು ಓದುವ
ಯೋಗ್ಯತೆ ಇಲ್ಲ. ಈಗ ಯಾವುದನ್ನೂ ಓದುವುದು ಬೇಡವೆನಿಸುತ್ತದೆ. ಒಂದೇ
ಮಾತಿನಲ್ಲಿ ಹೇಳುವುದಾದರೆ ಈಗ ಏನನ್ನೂ ಓದಬೇಕೆಂಬ ಆಶೆಯಿಲ್ಲ, ಅಪೇಕ್ಷೆ ಇಲ್ಲ.
ಓದತಕ್ಕ ಸಹನಶಕ್ತಿ ತೀರ ಇಲ್ಲ. ಅದಾಗಿ ನಾನೀಗ ವರ್ತಮಾನ ಪತ್ರಿಕೆಗಳನ್ನು
ಕೆಲಕೆಲವೇನೊ ಕವಿತೆ ನಾಟಕಗಳನ್ನು ಅಲ್ಲಲ್ಲಿ ಹೊಂಚಿ ನೋಡಿಬಿಡುತ್ತೇನಲ್ಲದೆ ಮುಂಚಿ
ನಂತೆ ಮನಸ್ಸಿಟ್ಟು ಓದಲಾಗುವುದಿಲ್ಲ, ನನಗೆ ಮುಖತಃ ನಮ್ಮ ಬಂಧು ಬಾಂಧವ

ರಿಂದ ಬರುತ್ತಿರುವ ಕಾಗದಗಳನ್ನು ಓದುತ್ತೇನೆ. ಅಷ್ಟೇ, ಹೆಚ್ಚಿನ ಬರೆಹದ ಕೆಲಸವನ್ನು ಮಾಡಲಾಗುವುದಿಲ್ಲ....

ಕಾಳಿದಾಸನ ವ್ಯಾಕರಣ ವಿರುದ್ಧ ಪ್ರಯೋಗಗಳು ಇವು ಮೂರು ಪ್ರಸಿದ್ಧವಾಗಿವೆ. ಇವು ಆತನ ರಘುವಂಶ ಕಾವ್ಯದಲ್ಲಿವೆ. ಅದರ ಪ್ರತಿ ಇಲ್ಲಿ ನನ್ನೊಂದಿಗಿಲ್ಲ. (1) ತಂ ಪಾತಯಾಂ ಪ್ರಥಮ ಮಾಸ ಪಪಾತ ಪಶ್ಚಾತ್.. (2) ವಿಭ್ರಂಶಯಾಂ ಯೋ ನಹುಷಂ ಚಕಾರ, ಮತ್ತು (3) ಸಂಯೋಜಯಾಂ ವಿಧಿವದಾಸ ಸಮೇತ ಬಂಧುಃ'. ಇಲ್ಲಿ 'ಪಾತಯಾಮಾಸ' 'ವಿಭ್ರಂಶಯಾಂ ಚಕಾರ' ಮತ್ತು 'ಸಂಯೋಜಯಾ ಮಾಸ' ಎಂದಿದ್ದು ....X.... ಕ್ರಿಯಾಪದಗಳ ರೂಪಗಳನ್ನು ಆತನು 'ಸಂಯೋ ಜಯಾಂ....ಆಸ' ಇತ್ಯಾದಿಯಾಗಿ ವ್ಯಾಕರಣವಿರುದ್ಧವಾಗಿ ವಿಂಗಡಿಸಿದ್ದಾನೆ. ಕನ್ನಡ ದಲ್ಲಿ 'ಆತನು ಅಲ್ಲಿಗೆ ಹೋಗುತ್ತಾನೆ' ಎಂಬುದನ್ನು ಅವನು ಹೋಗು + ಅಲ್ಲಿಗೆ + ತಾನೆ ಎಂದಂತೆ. ಅದು ಸಂಸ್ಕೃತದ ವ್ಯಾಕರಣದ ಮೇರೆಗೆ ಶುದ್ಧ ಅನ್ಯಾಯ. ಅಷ್ಟೇ. ಇವಕ್ಕಿಂತ ಚಿಕ್ಕವೂ ಬೇರೆ ಕೆಲವಿವೆ.

ಇತಿ ನಮಸ್ಕಾರ.

೧೦೫

**ಎನ್. ಎ. ಶೀನಪ್ಪ ಹೆಗ್ಗಡೆ** (ಮಂಗಳೂರು) ೪-೯-೧೯೬೧

ನಿಮ್ಮ ಕಾರ್ಡು ಇವತ್ತು ಮುಟ್ಟಿತು. ನನ್ನೊಂದಿಗಿರುವ ತುಳು "ಪಾಡ್ದನೊಳು" ಎಂಬ ಪುಸ್ತಕದಲ್ಲಿ "ದೇವು ಪೂಂಜಸಂಧಿ" ಎಂಬ ಪಾಡ್ದನ ಇಲ್ಲ. ಅದರಲ್ಲಿ ಇರುವ ಪಾಡ್ದನೊಗಳು ಇವು. ೨೧, ಇವು ಹೀಗಿವೆ. ೧) ಬೊಬ್ಬರ್ಯೆ ೨) ಮತ್ತು ೩) ಪಂಜುರ್ಲಿ ೧ ಮತ್ತು ೧೧. ೪) ಜುಮಾದಿ ೫) ಸಾರಾಳ ಜುಮಾದಿ ೬) ಜಾರಂ ತಾಯಿ ೭) ಶಾಂತುಸೆತ್ರಿಭೂ ೮) ಮಗ್ರಂತಾಯ ೯) ಕಲ್ಕುಡೆ ಕಲ್ಲುರ್ಟಿ, ೧೦) ಪೊಸಭೂತ ೧೨) ಪೊಸಮಹಾರಾಯೆ ೧೩) ಅವತಾರದೆಯ್ಯೊಂಗುಳು ೧೪) ಮುಡದೇರ್ ಕಾಳಭೈರವ ೧೫) ತೊಡಶಿನಾರ್, ೧೬) ದೇಯಿ ಬೈದೆದಿ ೧೭) ಮತ್ತು ೧೮) ಕೋಟಿ ಚೆನ್ನಾಯೆ I ಮತ್ತು II ೧೯) ಧೂಮಾವತಿ ಭೂತ ೨೦) ಪಂಜುರ್ಲಿ ಮತ್ತು ೨೧) ಪಿಲಿ ಚಾಮುಂಡಿ [ಈ ಕೊನೆಯ ಪಾಡ್ದನ ತುಳು ಭಾಷೆಯಲ್ಲಿಲ್ಲ, ಆದರ ಇಂಗ್ಲೀಷು ಭಾಷಾಂತರ ಕೊಟ್ಟಿದೆ.] ಇಷ್ಟೇ. ಇವಲ್ಲದೆ ಇನ್ನೂ ಕೆಲವು ಪಾಡ್ದನಗಳನ್ನು ಕೆಲವೊ ಹಲವೊ ವರ್ಷಗಳ ಹಿಂದೆ ಮಂಗಳೂರು ತೇರು ಬೀದಿಯಲ್ಲಿರುವ ಶಾರದಾ ಛಾಪಾಖಾನೆಯಲ್ಲಿ ಪ್ರಕಟಿಸಿದ್ದರು. ನಾನದನ್ನು ತರಿಸಿಕೊಂಡಿದ್ದೆ. ಯಾರೆಲ್ಲ ಎರವಲಾಗಿ ಕೊಂಡುಹೋಗಿದ್ದವರು ಈವರೆಗೆ ಮರಳಿ ತಂದುಕೊಟ್ಟಿಲ್ಲ! ನನಗೀಗ ಇಳಿಪ್ರಾಯದ ದೆಸೆಯಿಂದಾಗಿ ಕೊಂಚ ಅಶಕ್ತಿಯು ಬಾಧೆ ಇದೆ. ನೆನಪೂ ಕುಗ್ಗಿ ಬರುತ್ತಿದೆ. ಏನೋ ಎಲ್ಲಾ ಆತನ ಇಷ್ಟ, ಅದನ್ನು ಎರಡು ಕೈಗಳಿಂದಲೂ ಎತ್ತಿಕೊಂಡು ಅನುಭವಿಸಬೇಕಾದುದಷ್ಟೇ ನಮ್ಮ ಕರ್ತವ್ಯ ಅಷ್ಟೆ.

೧೧೪

ಶ್ರೀ ದೇವರು ನಿಮಗೂ ನಿಮ್ಮವರೆಲ್ಲರಿಗೂ ದೀರ್ಘಾಯುರಾರೋಗ್ಯವಿತ್ತು ಉತ್ತರೋತ್ತರ ಅಭಿವೃದ್ಧಿ ಮಾಡಿ ಸದಾ ಕಾಪಾಡಲಿ ಎಂದು ಪ್ರಾರ್ಥಿಸುತ್ತೇನೆ.

ಇತಿ ನಮಸ್ಕಾರ

೧೦೬

**ಬೈಕಾಡಿ ವೆಂಕಟಕೃಷ್ಣರಾವ** (ಬ್ರಹ್ಮಾವರ) ೧೨-೯-೬೧

ಗೋವಿಂದ ಪೈ ಮಾಡುವ ನಮಸ್ಕಾರ. ನಿಮ್ಮ ೧೧ನೆಯ ತಾರೀಕಿನ ಪತ್ರವೂ ಕಳೆದ ತಿಂಗಳ ೨೬ನೆಯ ತಾರೀಕಿನಂದು ನಿಮ್ಮ ಕರ್ನಾಟಕ ಸಂಘದವರಿಂದ ಆಚರಿಸಲ್ಪಟ್ಟ ನಾಡಹಬ್ಬದ ಸಂಕ್ಷಿಪ್ತ ವರದಿಯೂ ಅವುಗಳೊಂದಿಗೇನೇ ಹಿಂತಿರುಗಿ ಕಳುಹಿಸಿದ ನನ್ನದೊಂದು ಕವನದ ಅಚ್ಚಾದ ಪ್ರತಿಯೂ ಇಲ್ಲಿಗೆ ಕೈಸೇರಿ ಆ ಬಗ್ಗೆ ಅನೇಕ ಧನ್ಯವಾದಗಳು.

ವಿಶೇಷವೇನಿಲ್ಲ. ಇತಿ ನನ್ನ ಪ್ರೀತಿಪೂರ್ವಕ ನಮಸ್ಕಾರಗಳು.

೧೦೭

**ಬೈಕಾಡಿ ವೆಂಕಟಕೃಷ್ಣರಾವ** (ಬ್ರಹ್ಮಾವರ) ೨೩-೧೦-೬೧

ಗೋವಿಂದ ಪೈ ಮಾಡುವ ನಮಸ್ಕಾರ. ನಿಮ್ಮ ಬ್ರಹ್ಮಾವರದ ಕನ್ನಡ ಸಂಘವು ಪ್ರಕಟಿಸಿರುವ "ನಮ್ಮ ಅಜಪುರ" ಎಂಬ ಸೊಗಸಾದ ಮೇಲಾದ ಹೊತ್ತಗೆಯ ಪ್ರತಿ ಇಲ್ಲಿಗೆ ಇವತ್ತು ಕೈಸೇರಿ ಆ ಬಗ್ಗೆ ಧನ್ಯವಾದಗಳು. ಅದನ್ನು ಕುರಿತು ಕೆಲವೇ ಆದರೂ ಹೆಚ್ಚು ಮಾತುಗಳನ್ನು ಹೇಳೋಣ ಎಂದರೆ, ನನಗೆ ಒಪ್ಪಿಸಿರುವ ಗ್ರಂಥವನ್ನು ಕುರಿತು ನಾನೇ ಹೊಗಳುವರೆ, ಅದು ಪ್ರಾಯಃಶಃ ಆತ್ಮಸ್ತುತಿ ತಾನೇ ಎನಿಸದೇ ? ಎಂಬ ಅಂಜಿಕೆಯಿಂದ ಸುಮ್ಮನಿದ್ದೇನೆ....ನಿಮ್ಮ ಸಂಘಕ್ಕೂ ನಿಮಗೆ ಸರ್ವರಿಗೂ ಶ್ರೀ ದೇವರು ದೀರ್ಘಾಯುರಾರೋಗ್ಯವಿತ್ತು ಉತ್ತರೋತ್ತರ ಅಭಿವೃದ್ಧಿ ಮಾಡಿ ನಿಮ್ಮಿಂದ ಕನ್ನಡ ಸಾಹಿತ್ಯಕ್ಕೆ ಉದಾರವಾದ ಸೇವೆಯನ್ನು ಸಲ್ಲಿಸಿಕೊಳ್ಳಲಿ ಎಂದು ಪ್ರಾರ್ಥಿಸುತ್ತೇನೆ. ಇತಿ ಶಮ್

ನಿಮ್ಮ ಸಂಘದವರೆಲ್ಲರಿಗೆ ನನ್ನ ಪ್ರೀತಿಪೂರ್ವಕ ನಮಸ್ಕಾರಗಳು.

೧೦೮

**ಎಸ್. ಎಂ. ಶೆಟ್ಟಿ ಶಿವಮುಂಜೆ ಪರಾರಿ** (ಮುಂಬಯಿ) ೧೩-೧೧-೬೧

ಗೋವಿಂದ ಪೈ ಮಾಡುವ ನಮಸ್ಕಾರ. ನೀವು ಪ್ರೀತಿಪೂರ್ವಕವಾಗಿ ಕಳುಹಿಸಿರುವ "ನಿಯೋಗ" ಎಂಬ ಹಿಂದೀ ಪುಸ್ತಿಕೆಯ ನೀವು ಮಾಡಿರುವ ಕನ್ನಡ ಅನುವಾದವು ಇಲ್ಲಿಗೆ ಮೊನ್ನೆ ಮುಟ್ಟಿ ಆ ಬಗ್ಗೆ ಧನ್ಯವಾದಗಳು. ಓದಿ ನೋಡಿದೆ. ಬಹಳೇ ಹಿಂದಿನ ಕಾಲದಲ್ಲಿ ಸ್ತ್ರೀಯರನ್ನು ಕುರಿತು ನಮ್ಮ ಆ ಪೂರ್ವ ಕಾಲದ ಹಿರಿಯರು

ಹೇಗೆ ವರ್ತಿಸುತ್ತಿದ್ದರು ಎಂಬುದನ್ನು ಆ ಪುಸ್ತಕದಲ್ಲಿ ಹೇಳಿದೆ. ಅದನ್ನು ಓದು ವಾಗ ನಮ್ಮ ಮನಸ್ಸು ಹೇವರಿಸುತ್ತದೆ. ಆ ಹಿರಿಯರ ವರ್ತನೆಗಳನ್ನು ನಾವು ಸಹಜ ವಾಗಿ ಹೀಗಳೆಯುತ್ತೇವೆ. ಆದರೆ ಆ ಅತ್ಯಂತ ಪ್ರಾಚೀನ ಕಾಲದಲ್ಲಿ ನಮ್ಮ ಭರತಖಂಡದ ಹೊರಗಣ ಚೀನಾ (China) ಬಾಬಿಲೋನ್ (Babylon) ಅಸ್ಸಿ ರಿಯಾ (Assyria) ಐಗುಪ್ತ (Egypt)-ಆಗ ಅದಕ್ಕೆ ಮಿಸ್ರ – Misra ದೇಶ ವೆಂದೂ ಹೆಸರಿತ್ತು-ಮೊದಲಾದ ಆಸ್ಯಾ (Asia) ಖಂಡದ ಆಯಾಯ ದೇಶಗಳಲ್ಲಿ ಮಾತ್ರವಲ್ಲ ನಮ್ಮ ಖಂಡಕ್ಕೆ ಹೊರಗಣ ಯುರೋಪು (Europe) ಆಫ್ರಿಕಾ (Africa) ಅಮೇರಿಕಾ (America) ಮತ್ತು ಔಸ್ಟ್ರೇಲಿಯಾ (Australia) ಖಂಡ ಗಳಲ್ಲಿಯೂ ಕೂಡಾ ಆ ಅತ್ಯಂತ ಪ್ರಾಚೀನ ಕಾಲದ ಜನರ ಕಟ್ಟಳೆಗಳೆಲ್ಲ ಇದೇ ವಿಧವಾಗಿದ್ದುವು. ಅವೆಲ್ಲಾ ಸಮಾಜಗಳಲ್ಲಿಯ ಪದ್ಧತಿ ಇದೇ ರೀತಿಯಾಗಿತ್ತು. ಉದಾಹರಣೆಯಾಗಿ ಹೇಳುವುದಾದರೆ ಯೆಹೊದ್ಯರ (Jews) ಚರಿತ್ರವನ್ನು ಗಮನಿ ಸೋಣ. ಬಾಯ್ಬಲಿನ (Bible) ಹಳೆಒಡಂಬಡಿಕೆ ಎಂಬ ಗ್ರಂಥದಲ್ಲಿ ಶ್ರೀ ದೇವರು ಪ್ರಥಮತಃ ಮನಷ್ಯ ಸೃಷ್ಟಿಯನ್ನು ಹೇಗೆ ಉಂಟುಮಾಡಿದನು ಎಂಬು ದನ್ನು ಹೇಳುವಲ್ಲಿ ಹೀಗಂದದೆ-ದೇವರು ಮೊತ್ತಮೊದಲಲ್ಲಿ ಆದಮ್ (Adam) ಎಂಬ ಗಂಡು ವ್ಯಕ್ತಿಯನ್ನು ಸೃಷ್ಟಿಸಿ ಆ ಬಳಿಕ ಅವನ ಎಡಪಕ್ಕದ್ದೇನೋ (ಎಂದು ನನ್ನ ನೆನಪು) ಒಂದು ಎಲುಬನ್ನು ಹೊರ ತೆಗೆದು ಅದರಿಂದ ಹೆಂಗಸನ್ನು ಸೃಷ್ಟಿಸಿ ದನು. ಅವಳ ಹೆಸರು ಹವ್ವಾ (Eve) ಎಂದು. ಅವರಿಬ್ಬರು ತಂತಮಗೆ ಅಣ್ಣ ಮತ್ತು ತಂಗಿಯಾದರೋ? ಇಲ್ಲವೋ? ಅವರಿಗೆ ಕಾಯಿನ್ (Cain), ಹೆಬೇಲ್ (Abel) ಎಂಬ ಇಬ್ಬರು ಗಂಡು ಮಕ್ಕಳೂ, ಒಬ್ಬರಿಬ್ಬರೆನೋ (ಎಂದೂ ನನ್ನ ನೆನಪು) ಹೆಣ್ಣು ಮಕ್ಕಳೂ ಹುಟ್ಟಿದರು. ಅವರು ತಂತಮ್ಮೊಳಗೆ ಒಟ್ಟುಗೂಡಿ ಅವರಿಗೆ ಮಕ್ಕಳಾದುವು. ಹಾಗೆಯೇ ಅವರ ಮುಂದು ಮುಂದಿನ ಸಂತತಿ ಬೆಳೆಯ ತೊಡಗಿತು. ಬೈಬಲಿನ ಆದಿ ಕ್ರಿಸ್ತ ಪೂರ್ವ 5000 ವರ್ಷವೆಂದೂ, ನಮ್ಮ ಆರ್ಯ ಜನಾಂಗದ ಪ್ರಪ್ರಥಮ ಧರ್ಮಗ್ರಂಥವಾದ ಋಗ್ವೇದದ ಕಾಲ ಕ್ರಿಸ್ತ ಪೂರ್ವ 8000ಕ್ಕೂ ಹಿಂದೆ ಎಂದೂ ನಿಶ್ಚಯಿಸಲಾಗಿದೆ. ಹಾಗಾದರೆ ಆಗ್ಗೆ ನಮ್ಮ ಹಿರಿ ಯರು ಅವರವರ ಸತ್ತ ಮಗಂದಿರ ಹೆಂಡಂದಿರೊಡನೆ ನಿಯೋಗ ಮಾಡುತ್ತಿದ್ದರು ಎಂಬಲ್ಲಾಗಲೀ, ನಿಮ್ಮ ಪುಸ್ತಕದಲ್ಲಿಯ ಇತರ ಉದಾಹರಣೆಗಳಲ್ಲಾಗಲೀ, ಈಗಣ ಕಾಲದ ನಮಗೆ ತೀರಾ ಹೇಯವೆನಿಸಿ ನಾವು ಚೀ ಚೀ ಕರಿಸುವ ಆಚಾರಗಳಿದ್ದುದನ್ನು ತಿಳಿದು ನಾವು ಆ ಬಗ್ಗೆ ನಾಚಿಕೆ ಪಡಬೇಕು, ಅವರನ್ನು ಹಳಿಯಬೇಕು ಎಂದಿಲ್ಲ. ಈಗ ನಮಗೆ ಹೀನವೆನಿಸುವ ಆ ವಿಚಾರಗಳು ಆಗಣ ಅತೀವ ಪ್ರಾಚೀನ ಕಾಲದಲ್ಲಿ ಸಮಗ್ರ ಜಗತ್ತಿನಲ್ಲಿ ಎಲ್ಲೆಲ್ಲಿಯೂ ಏಕಪ್ರಕಾರವಾಗಿ ಹರಡಿದ್ದುವು. ಉದಾ ಹರಣೆಯಾಗಿ ನಾನೊಂದು ಮಾತು ಹೇಳಿ ಮುಗಿಸುತ್ತೇನೆ. ನಮ್ಮಲ್ಲೀಗ ಹಿರಿ ಯರೂ, ಹಿರಿಯಳೂ, ಸರ್ವರೂ ಕೂದಲು Crop ಮಾಡಿಸಿ ಕತ್ತರಿಸಿಕೊಳ್ಳುತ್ತಾ ರಷ್ಟೆ ! ಹೆಚ್ಚು ಕಡಿಮೆ 50 ವರ್ಷಗಳ ಹಿಂದೆ ಕ್ರೋಪ್ ಮಾಡಿದವರು ದೇವಸ್ಥಾನ

ಗಳನ್ನು ಒಳಹೋಗಬಾರದೆಂದು ಕಟ್ಟು ಇತ್ತು. ಮಾತ್ರವಲ್ಲದೆ ಕೆಲವು ಮಡಿತನದ ಮನೆಗಳಲ್ಲಿ ಹಾಗೆ ಮಾಡಿದ ಶಾಲೆಯ ಹುಡುಗರನ್ನು ಅವರವರ ಮನೆಯಿಂದ ಹೊರದಬ್ಬಿದ ಉದಾಹರಣೆಗಳನ್ನೂ ನಾನು ಬಲ್ಲೆ. ಅದಾಗ ಆಗ್ಗೆ ಸಲ್ಲದು ಎಂಬುದನ್ನು ಈಗಣ ದಿನಗಳಲ್ಲಿ ಸಲ್ಲುತ್ತಿರುತ್ತದೆ – ಹೇಗೊ ಹಾಗೆಯೇ ನಿಯೋಗ ಮೊದಲಾದುವು ಕೂಡಾ! ಅಂಥಾ ಕಟ್ಟಳೆಗಳನ್ನು ಕುರಿತು ಓದಿ ತಿಳಕೊಂಡು ಸಮಾಜದ ಕುರಿತು ಅನುಭವ ಪಡೆಯಬೇಕಲ್ಲದೆ ಅವುಗಳನ್ನು ತೀರಾ ಕುತ್ಸಿತವೆಂದು ನಿಂದಿಸಬಾರದು. ಆ ಬಗ್ಗೆ ನಮ್ಮ ಹಿರಿಯರನ್ನು ಅಲ್ಲಗಳೆಯಬಾರದು. ಇಷ್ಟೆ!

ಇತಿ ನಮಸ್ಕಾರ

೧೦೯

**ಬೈಕಾಡಿ ವೆಂಕಟಕೃಷ್ಣರಾವ** (ಬ್ರಹ್ಮಾವರ) ೧೨-೧೨-೬೧

ಗೋವಿಂದ ಪೈ ಮಾಡುವ ನಮಸ್ಕಾರ. ನಿಮ್ಮ ಕರ್ಣಾಟಕ ಸಂಘದ ಪರವಾಗಿ ನೀವು ಸ್ನೇಹಪೂರ್ವಕವಾಗಿ ಕಳುಹಿಸಿರುವ ಆಮಂತ್ರಣ ಪತ್ರಿಕೆ ಮುಟ್ಟಿ ಅನೇಕ ಧನ್ಯವಾದಗಳು. ನನ್ನ ಮಿತ್ರವರ್ಯರಾದ ಶ್ರೀ ವಿ. ಸೀತಾರಾಮಯ್ಯನವರಿಗೆ ನಾಡದು ೧೪ನೆಯ ತಾರೀಕಿನಂದು ನಿಮ್ಮ ಸಂಘವು ಒಂದು ಪತ್ರವನ್ನು ಅರ್ಪಿಸಿ ಗೌರವಿಸಬೇಕೆಂದು ನಿರ್ಧರಿಸಿದೆ ಎಂದು ತಿಳಿದು ಬಹಳ ಸಂತೋಷಪಡುತ್ತೇನೆ.

ಶ್ರೀ ವಿ. ಸೀಯವರು ಆಧುನಿಕ ಕನ್ನಡ ಸಾಹಿತ್ಯದ ಮಧ್ಯಮ ಯುಗದವರು. ಉಚ್ಚ ಪದವಿಯ ಶ್ರೇಷ್ಠ ಸಾಹಿತಿಗಳು. ಇಂತಹ ಗೌರವಕ್ಕೆ ನಿಶ್ಚಯವಾಗಿಯೂ ಶತಧಾ ಸತ್ಪಾತ್ರರು. ನೀವು ಅವರನ್ನು ಗೌರವಿಸಲಿಕ್ಕಿರುವ ಈ ಸಮಾರಂಭಕ್ಕೆ ಯಶಸ್ಸನ್ನು ಕೋರುತ್ತೇನೆ. ನಿಮ್ಮ ಅತಿಥಿ ಮಹಾಶಯರಾದ ಶ್ರೀ ವಿ. ಸೀಯವರು ಇನ್ನು ಮುಂದೆಯೂ ಕನ್ನಡ ಸಾಹಿತ್ಯಕ್ಕೆ ಉತ್ತಮವಾದ ಸೇವೆಯನ್ನು ಸಲ್ಲಿಸುತ್ತ ಚಿರಕಾಲ ಬಾಳುತ್ತಿರುವಂತೆ ಅವರಿಗೂ ಅವರವರೆಲ್ಲರಿಗೂ ದೀರ್ಘಾಯು ರಾರೋಗ್ಯಾದಿ ಭಾಗ್ಯವಿತ್ತು ಉತ್ತರೋತ್ತರ ಅಭಿವೃದ್ಧಿ ಮಾಡಿ ಕಾಪಾಡಲಿ ಎಂದು ಪ್ರಾರ್ಥಿಸುತ್ತೇನೆ. ಅವರಿಗೆ ನನ್ನ ಹೃತ್ಪೂರ್ವಕವಾದ ವಂದನೆಗಳನ್ನು ನನ್ನ ಪರವಾಗಿ ಅರ್ಪಿಸಬೇಕಾಗಿ ನಿಮ್ಮನ್ನು ವಿಜ್ಞಾಪಿಸುತ್ತೇನೆ. ಬಹಳ ಉಪಕಾರ. ಇತಿ ನಿಮಗೂ ನಿಮ್ಮ ಸಂಘದವರೆಲ್ಲರಿಗೂ ನನ್ನ ಸೌಹಾರ್ದದ ವಂದನೆಗಳು.

೧೧೦

**ಬೈಕಾಡಿ ವೆಂಕಟಕೃಷ್ಣರಾವ** (ಬ್ರಹ್ಮಾವರ) ೧೮-೧೨-೬೧

ನಿಮ್ಮ ಅಜಪುರದ ಕರ್ಣಾಟಕ ಸಂಘದ ಆಶ್ರಯದಲ್ಲಿ ಇವತ್ತೇ ದಶಂಬರ ೧೮ನೆಯ ತಾರೀಕಿನಂದು ಜರಗಲಿಕ್ಕಿರುವ ನನ್ನ ಮಿತ್ರವರ್ಯರೂ, ಸಣ್ಣ ಕತೆಗಾರರೇ

ಅಲ್ಲ ಉತ್ತಮ ಕವಿಗಳೂ ಆಗಿರುವ ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರರಿಗೆ ಸನ್ಮಾನ ಪತ್ರವನ್ನು ಅರ್ಪಿಸಿ ಗೌರವಿಸುವ ಸಮಾರಂಭದ ಆಮಂತ್ರಣ ಪತ್ರಿಕೆ ದೈವವಶಾತ್ ಇವತ್ತೇ ೧೮ನೆಯ ತಾರೀಕಿಸಂದು ಇಲ್ಲಿ ನನ್ನ ಕೈಸೇರಿದೆ. ಆ ಬಗ್ಗೆ ಅನೇಕಾನೇಕ ಧನ್ಯವಾದಗಳು. ಆ ಸಮಾರಂಭವು ಇವತ್ತು ಬಹಳ ಯಶಸ್ವಿಯಾಗಿ ನೆರವೇರುವಂತೆ ಶ್ರೀ ದೇವರು ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತೇನೆ. ಇತಿ. ಶ್ರೀ ಅಯ್ಯಂಗಾರರಿಗೂ ನಿಮಗೂ ನನ್ನ ನಮಸ್ಕಾರಗಳು.

೧೧೧

**ರಾಮು ನೊಳೆಯಾರ** (ಮಂಗಳೂರು) ೩೧-೧೨-೬೧

ಗೋವಿಂದ ಪೈ ಮಾಡುವ ನಮಸ್ಕಾರ. ನಮ್ಮ ದಕ್ಷಿಣ ಕನ್ನಡ ಜಿಲ್ಲೆಯ ಉಳ್ಳಾಲದ ರಾಣಿ ಅಭಯಾ ದೇವಿ ಅಥವಾ ಅಬ್ಬಕ್ಕದೇವಿ ಎಂಬವಳನ್ನು ಕುರಿತು ನಮ್ಮ ಇತಿಹಾಸದ ಹಾಳುಬೀಳುಗಳಿಂದ ಅಗೆದುತೆಗೆದ ವಿಷಯವನ್ನುಎತ್ತಿಕೊಂಡು ನೀವು ಕಾದಂಬರಿಯ ರೂಪದಲ್ಲಿ ರಚಿಸಿದ ಚಾರಿತ್ರಿಕ ಕಥೆಯ ಪ್ರತಿ ಇಲ್ಲಿಗೆ ಮುಟ್ಟಿ (೧೭-೮-೬೧) ನಾಲ್ಕು ತಿಂಗಳು ಕಳೆದುಹೋದುವು. ನನ್ನ ಈಗಣ ಅಶಕ್ತತೆಯ ದೆಸೆಯಿಂದ ಆಗಿರುವ ಈ ತಪ್ಪಿನ ಬಗ್ಗೆ ದಯಮಾಡಿ ಕ್ಷಮಿಸುವುದು. ಬಹಳ ಉಪಕಾರ. ಕಥೆ ಬಹಳ ಚೆನ್ನಾಗಿದೆ. ಓದೋದಬೇಕು ಎನಿಸುತ್ತಿದೆ. ತೋಳುಗಳಲ್ಲಿ ಶೌರ್ಯ ಮಸೆಯುತ್ತಿದೆ. ಆ ಪ್ರತ್ಯಕ್ಷ ರಾಕ್ಷಸರಿಂದ ಪೋರ್ತುಗೀಸರನ್ನು ಒಮ್ಮೆ ನಿರ್ನಾಮಗೊಳಿಸಲೇ ಎನಿಸುತ್ತಿದೆ. ನಮ್ಮ ಮಾತೃದೇವಿಯ ಚರಣತಲದಲ್ಲಿ ನೀವು ಈ ಕೃತಿಯನ್ನು ಕಾಣಿಕೆಯಾಗಿ ಒಪ್ಪಿಸಿರುತ್ತೀರಿ. ಈ ಕೃತಿ ಕನ್ನಡ ಸಾಹಿತ್ಯದಲ್ಲಿ ಹೆಸರುವಾಸಿಯಾಗಿ ಚಿರಕಾಲ ಬಾಳುವಂತೆ ಶ್ರೀ ದೇವರು ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.

ಇತಿ ನಮಸ್ಕಾರ

೧೧೨

**ಕೆ. ವೆಂಕಟ್ರಾಯಾಚಾರ್** (ಸುರತ್ಕಲ್) ೪-೩-೬೨

ಗೋವಿಂದ ಪೈ ಮಾಡುವ ನಮಸ್ಕಾರ. ನಿಮ್ಮ ೧ನೆಯ ತಾರೀಕಿನ ಕಾರ್ಡು ಮುಟ್ಟಿ ಧನ್ಯವಾದಗಳು. ನಾನು ನಿಮಗೆ ಬರೆದಿರುವ ಎರಡು ಪತ್ರಗಳಲ್ಲಿ ಎರಡು ವಿಧವಾಗಿ ಬೇರೆ ಬೇರೆ ಬರೆದಿರುತ್ತೇನೆ. ಅದರಿಂದ ಅವುಗಳಲ್ಲಿ ಯಾವುದನ್ನು ಒಪ್ಪಿಕೊಳ್ಳಬೇಕು? ಯಾವುದನ್ನು ಬಿಟ್ಟುಬಿಡಬೇಕೆಂದು ತಿಳಿಯದೆ ಬಹಳ ಗಲಿಬಿಲಿಗೆ ಕಾರಣವಾಗಿದೆ ಎಂದು ಬರೆದಿರುತ್ತೀರಿ. ನನಗಾದರೆ ಈಗ ನೆನಪೇ ಬಹಳ ಕಡಿಮೆಯಾಗಿ ಬರುತ್ತಿರುವುದರಿಂದ, ಆ ಪತ್ರಗಳಲ್ಲಿ ನಾನು ಏನೆಂದು ಬರೆ

ದಿರುತ್ತೇನೆ ಎಂದು ನೆನಪಿಗೆ ಬಾರದು. ಆದರೆ ನನ್ನ ಅವೆರಡರ ಪ್ರತಿಗಳನ್ನೊಮ್ಮೆ ಓದಿಲ್ಲದೆ ಹಾಗೂ ಹೀಗೂ ಹೇಳಲಿಕ್ಕೆ ಬರುವುದಿಲ್ಲ. ಆದಕಾರಣ ನನ್ನ ಅವೆರಡೂ ಪತ್ರಗಳನ್ನೊಮ್ಮೆ ನೀವು ಕೂಡಲೆ ನನಗೆ ಮರಳಿ ಕಳುಹಿಸಿಕೊಡುವಿರಾದರೆ, ಅವನ್ನು ಓದಿನೋಡಿ, ಬೇರೆಯೇ ನಾಲ್ಕು ಮಾತುಗಳನ್ನು ಬರೆದು ಕಳುಹಿಸುವೆನು. ಅದರಲ್ಲಿ ಶ್ರೀ ಉಗ್ರಾಣ ಮಂಗೇಶರಾಯರನ್ನು ಬೇಕಾದರೆ ಬಿಟ್ಟುಬಿಡಬಹುದು. ನನಗೆ ಈಗಣ ವಯೋಮಾನಕ್ಕೆ ಮೀರಿದ ಪತ್ರವ್ಯವಹಾರ ವಿದೆಯಾದ ಕಾರಣ ಪ್ರತಿಯೊಂದಕ್ಕೂ ನಾನೇ ಆಲೋಚಿಸಬೇಕು. ನಾನೇ ಪ್ರತ್ಯುತ್ತರಿಸಬೇಕಾದ ಕಾರಣ ನೀವು ಆದಷ್ಟು ಬೇಗನೆ ನನ್ನ ಅವೆರಡೂ ಪತ್ರಗಳನ್ನೂ ನನಗೆ ಮರಳಿ ಕಳುಹಿಸಿಕೊಡುವಿರಾದರೆ ನನ್ನ ನಾಲ್ಕು ಮಾತುಗಳನ್ನು ಈಗಣ ಅಶಕ್ತತೆಗೆ ಸರಿಯಾಗಿ ಬಹಳ ಹೆಚ್ಚೆಂದರೆ ಅವು ಇಲ್ಲಿಗೆ ಮುಟ್ಟಿದಂದಿನಿಂದ ಒಂದು ಹಪ್ತೆಯೊಳಗೆ ತಮಗೆ ಮರಳಿ ಬರೆದು ಕಳುಹಿಸುವೆನು. ಇಷ್ಟೆ, ನಿಮ್ಮ ಕಾರ್ಡಿನಲ್ಲಿ ನೀವು ಬರೆದ ಮಿಕ್ಕೆಲ್ಲ ವಿಷಯಗಳನ್ನು ಕುರಿತು ನಿಧಾನವಾಗಿ ಬರೆಯಬೇಕಾಗಿದೆ. ಈಗ ಶಕ್ಯವಿಲ್ಲ. ದಯಮಾಡಿ ಕ್ಷಮಿಸುವುದು. ವಿಶೇಷವೇನಿಲ್ಲ.

ಇತಿ ನಮಸ್ಕಾರ.

೧೧೩

**ಕೆ. ವೆಂಕಟ್ರಾಯಾಚಾರ್** (ಸುರತ್ಕಲ್) ೧೨-೩-೬೨

**ಜರೂರು**

ಗೋವಿಂದ ಪೈ ಮಾಡುವ ನಮಸ್ಕಾರ. ನಿಮಗೆ ನಾನು ಬರೆದು ಕಳುಹಿಸಿದ ಅವೆರಡೂ ಪತ್ರಗಳನ್ನು ದಯಮಾಡಿ ಈ ಕಾರ್ಡನ್ನು ಕಂಡಕೂಡಲೇ ನನಗೆ ಮರಳಿ ಕಳುಹಿಸಿಕೊಡಿರಿ. ಅವೆರಡನ್ನೂ ಮರಳಿ ಓದಿನೋಡಿ ನಿಮಗೆ ಹೇಗೆ ಬೇಕೋ ಹಾಗೆ ನಾನು ನಾಲ್ಕು ಮಾತುಗಳನ್ನು ಬರೆದು ಕಳುಹಿಸುವೆನು. ಅನಾವಶ್ಯಕವಾದ ಹೆಸರುಗಳನ್ನು ವಿಸರ್ಜಿಸಿ ನಾನೇ ಬರೆದು ಕಳುಹಿಸುವೆನು. ನನ್ನ ಈಗಣ ಅಶಕ್ತತೆಯಲ್ಲಿ ನನ್ನನ್ನು ಮತ್ತೂ ಮತ್ತೂ ದಣಿಸಬೇಡಿ. ವಿಶ್ವಾಸವಿರಲಿ. ಎಲ್ಲದಕ್ಕೂ ಒಂದು ಮಿತಿಯಿದೆ. ಹಾಗೆಯೇ ನೀವು ನನ್ನನ್ನು ದಣಿಸುವರೆಯೂ ಮಿತಿಯಿದೆ. ನೀವು ನನ್ನ ಎರಡೂ ಪತ್ರಗಳನ್ನು ಮರಳಿ ಕೊಡಲೊಲ್ಲಿರಾದರೆ ನನಗೆ ಶ್ರೀ ದೇವರು ಬುದ್ಧಿ ಕೊಟ್ಟಂತೆ ಮಾಡುವೆನು. ಈವರೆಗೆ ತಾಳಿಕೊಂಡೆ. ಆದರೆ ತಾಳ್ಮೆಗೂ ಮಿತಿ ಇದೆ ಎಂಬುದನ್ನು ಬಲ್ಲಿರಷ್ಟೆ.

ಇತಿ ನಮಸ್ಕಾರ

೧೧೪

**ಕೆ. ವೆಂಕಟ್ರಾಯಾಚಾರ್** (ಸುರತ್ಕಲ್) ೨೧-೩-೬೨

ನಮಸ್ಕಾರ. ನಿಮ್ಮ ಕಾರ್ಡಿನ ಪ್ರತ್ಯುತ್ತರವಾಗಿ ಇಂದಿಗೆ ೯ ದಿನಗಳ ಹಿಂದೆ ೧೨ನೆಯ ತಾರೀಖಿನಂದು ನಾನು ನಿಮಗೆ ಬರೆದ ಪತ್ರದಲ್ಲಿ ನಿಮ್ಮೊಂದಿಗೆ ಇರುವ

ಅವೆರಡೂ ನನ್ನ ಪತ್ರಗಳನ್ನು ನನಗೆ ಮರಳಿ ಕಳುಹಿಸಿಕೊಡಿ, ಯಾರೂ...ಬೇರೆಯವರ ಹೆಸರು ಹಾಕದೆ ನಿಮಗೆ ಯಾವ ರೀತಿಯಲ್ಲಿ ಬೇಕೋ ಆ ರೀತಿಯಲ್ಲಿ ನಿಮಗೆ ನನ್ನ ನಾಲ್ಕು ಮಾತುಗಳನ್ನು ಕೂಡಲೆ ಬರೆದು ಕಳುಹಿಸುತ್ತೇನೆ, ಎಂದು ಒಂದು ಪತ್ರವನ್ನು ಬರೆದಿದ್ದೆ. ಇಷ್ಟು ದಿವಸಗಳಾದರೂ ಅವಕ್ಕೆ ಪ್ರತ್ಯುತ್ತರವೂ ಇಲ್ಲ. ನನ್ನ ಪತ್ರಗಳನ್ನು ನನಗೆ ಮರಳಿ ಕೊಟ್ಟುದೂ ಇಲ್ಲ. ಏನೆಂದು ಕಾರಣ ತಿಳಿಯದು - ನೀವೇನೂ ಅಸೌಖ್ಯದಿಂದ ಇದ್ದಿರುವಿರಾದರೆ, ಇತರರಿಂದಾದರೂ ನನಗೆ ಬರೆಯಿಸಿ ತಿಳಿಯಪಡಿಸುವ ಉಪಕಾರ ಮಾಡಿರಿ.

ನನ್ನ ಈಗಣ ಅಶಕ್ತತೆಯಿಂದ ನನಗೆ ಪದೇ ಪದೇ ಪತ್ರಗಳನ್ನು ಬರೆಯಲು ಸಾಧ್ಯವಿಲ್ಲ. ಉದ್ದುದ್ದ ಪತ್ರಗಳನ್ನು ಬರೆಯಲು ಶಕ್ಯವಲ್ಲ. ಆದುದರಿಂದ ನಮ್ಮ ಈ ಪ್ರಕರಣದಲ್ಲಿ ನಿಮಗೆ ನಾನು ಬರೆಯುವ ಪತ್ರ ಪ್ರಾಯಶಃ ಕೊನೆಯದೇನೋ. ಈ ಪತ್ರದಲ್ಲಿ ನಾನು ನಿಮಗೆ ಬರೆದು ತಿಳಿಸುವುದೇನೆಂದರೆ ಈ ಪತ್ರಕ್ಕೆ ಜವಾಬನ್ನು ಬರೆಯಿರಿ ಅಥವಾ ಇಲ್ಲದಿರಿ, **ಅವೆರಡೂ ಪತ್ರಗಳನ್ನು ನನಗೆ ಮರಳಿ ಕಳುಹಿಸಿಕೊಡಬೇಕು.** ನೀವು ಈಗ ಅಸೌಖ್ಯದಲ್ಲಿ ಇರುವಿರಾದರೆ ಕೂಡಲೇ ಹಾಗೆ ಬರೆಯಿಸಿ ಕಳುಹಿಸಬೇಕು. ಮಾತ್ರವಲ್ಲ ನನ್ನ ಆ ಪತ್ರಗಳನ್ನೂ ಬೇರೆಯವರಿಂದ ನನಗೆ ಕಳುಹಿಸಿಕೊಡಬೇಕು – ಇದಕ್ಕೆ ತಪ್ಪಲೇ ಬಾರದು – ಸರ್ವಥಾ ತಪ್ಪಬಾರದು – ತಪ್ಪಿದರೆ ನನ್ನ ಪತ್ರಗಳೆರಡನ್ನೂ ನನಗೆ ಕಳುಹಿಸಿಕೊಡಬೇಕು, ಹೆಚ್ಚಾದರೆ ಇವತ್ತಿನಿಂದ ೧೦ ದಿನದೊಳಗಿನ ಈ ಮಾರ್ಚಿ ತಿಂಗಳ ಅಂತ್ಯದೊಳಗೆ ನನ್ನ ಆ ಪತ್ರಗಳನ್ನು ನನ್ನ ಕೈಸೇರಿಸಲೇಬೇಕು. ಆ ಬಗ್ಗೆ **ನೀವೇ ಖುದ್ದಾಗಿ ಇಲ್ಲಿಗೆ ಬರಬಾರದು.** ಸರ್ವಥಾ ಬರಬಾರದು. ಅವನ್ನು ಟಪ್ಪಾಲಿನಲ್ಲಿಯೇ Per Express Delivery ಯಾಗಿ ನನಗೆ ಕಳುಹಿಸಿಕೊಡಬೇಕು. ಹಾಗೆ ಮಾಡಲಿಕ್ಕೆ ತಪ್ಪಿದರೆ ನಿಮಗೆ ಯಾವುದಾದರೊಂದು ದೇವರಲ್ಲಿ ವಿಶ್ವಾಸವಿದ್ದರೆ, ನಿಮಗೆ ಆ ದೇವರ ಆಣೆಯನ್ನು ಹಾಕುತ್ತೇನೆ. ಇದು ನನ್ನ ಕೊನೆಯ ಪ್ರಯತ್ನ. ಇದೂ ಸಫಲಿಸದೆ ಹೋದರೆ ನನಗೆ ಏನು ಮಾಡಬೇಕೆಂದು ಆ ಶ್ರೀದೇವರು ಬುದ್ಧಿ ಕೊಡುವನೋ ಆ ರೀತಿಯಲ್ಲಿ ವರ್ತಿಸುತ್ತೇನೆ. ಇದೇ ನಿಜ. ನಾನಿನ್ನು ಈ ತಿಂಗಳ ಕೊನೆಯವರೆಗೂ ದಿನಗಳನ್ನು ಕಾಯುತ್ತೇನೆ.

ಇತಿ ನಮಸ್ಕಾರ

೧೧೫

**ಕೆ. ನೀಲಕಂಠಭಟ್** (ಕಡಿರುದ್ಯಾವರ) ೨೨-೩-೬೨

ಗೋವಿಂದ ಪೈ ಮಾಡುವ ನಮಸ್ಕಾರ. ನಿಮ್ಮ ೧೯ನೆಯ ತಾರೀಕಿನ ಕಾರ್ಡು ನಿನ್ನೆ ಇಲ್ಲಿಗೆ ಮುಟ್ಟಿದೆ. 'ಕೌಶಿಕ ರಾಮಾಯಣ'ವೆಂಬ ಕಾವ್ಯದ ಹೆಸರನ್ನು ನನ್ನೊಂದಿಗೆ ಇರುವ 'ಕರ್ಣಾಟಕ ಕವಿಚರಿತೆ'ಯ ಸಂಪುಟಗಳಲ್ಲಿ ಹುಡುಕಾಡಿದೆ.

ಅವಲ್ಲಿಯೂ ಇಲ್ಲ, ನಾನು ಆ ಹೆಸರನ್ನು ಈವರೆಗೆ ಕೇಳಿಯೂ ಇಲ್ಲ. ಆದರೆ ೬ ಹೆಸರನ್ನು ಕಾಂಬಾಗ, ಅಂಥಾ ಹೆಸರಿನದೊಂದು ಕಾವ್ಯವು ಇದ್ದಿರಬಹುದು ಎಂಬುದು ಸಂಭವನೀಯವೆನಿಸುತ್ತದೆ ಅಷ್ಟೆ. ದಯಮಾಡಿ ಕ್ಷಮಿಸುವುದು. ಆ ಕಾವ್ಯದ ಅಸ್ತಿತ್ವ ಅಥವಾ ನಾಸ್ತಿತ್ವವನ್ನು ಕುರಿತು ನಿಮಗೆ ನಿಶ್ಚಿತವಾದ ವಿವರವು ನಿಮಗೆ ಬೇಗನೆ ದೊರಕುವಂತೆ ಶ್ರೀ ಪರಮಾತ್ಮನು ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತೇನೆ.

ಇತಿ ನಮಸ್ಕಾರ

೧೧೬

**ಕೆ. ವೆಂಕಟ್ರಾಯಾಚಾರ್ಯ (ಸುರತ್ಕಲ್)** ೨೭-೩-೬೨

ಗೋವಿಂದ ಪೈ ಮಾಡುವ ನಮಸ್ಕಾರ. ನಾನು ನಿಮಗೆ ಈ ಮುಂಚೆ ಬರೆದಿದ್ದ ನನ್ನ ಅವೆರಡೂ ಪತ್ರಗಳನ್ನು ನನಗೆ ಮರಳಿ ಕಳುಹಿಸಿಕೊಟ್ಟು ನನ್ನ ಅಪೇಕ್ಷೆಯನ್ನು ಸಲ್ಲಿಸಿರುವ ಬಗ್ಗೆ ನಿಮಗೆ ಅನೇಕ ಧನ್ಯವಾದಗಳು. ಆ ಕುರಿತು ಮೊನ್ನೆ ೨೪ನೆಯ ತಾರೀಕಿನಂದು ನಿಮಗೆ ಬರೆದ ಕಾರ್ಡಿನಲ್ಲಿ ಹೇಳಿರುತ್ತೇನೆ. ಇಷ್ಟರಲ್ಲಿ ಕಾರ್ಡು ನಿಮಗೆ ಮುಟ್ಟಿರಬಹುದಷ್ಟೇ.

ನೀವು ಪ್ರಕಟಿಸಲಿಕ್ಕಿರುವ "ಉತ್ತರ ರಾಮ ಕಥೆ"ಯ ಉತ್ತರಾರ್ಧ ಹೊರಬರುವ ಮುಂಚೆ ನನ್ನ "ನಾಲ್ಕು ಮಾತುಗಳು" ನಿಮ್ಮ ಕೈಸೇರಬೇಕೆಂಬ ನಿಮ್ಮ ಅಪೇಕ್ಷೆಯ ಮೇರೆಗೆ ಅವನ್ನು ಬರೆದು ಇದರೊಂದಿಗೆ ಮಡಗಿ ಕಳುಹಿಸಿರುತ್ತೇನೆ. ಆ ನಾಲ್ಕು ಮಾತುಗಳಿಗೆ ಒಂದೇ ಒಂದು ಶಬ್ದವನ್ನು ಇನ್ನು ಕೂಡಿಸಲಿಕ್ಕಾಗಲಿ, ಅವುಗಳಲ್ಲಿಯ ಒಂದೇ ಒಂದು ಶಬ್ದವನ್ನು ಬದಲಾಯಿಸಲಿಕ್ಕಾಗಲಿ, ಅವುಗಳಿಂದ ಒಂದೇ ಒಂದು ಶಬ್ದವನ್ನು ತೆಗೆದುಬಿಡಲಿಕ್ಕಾಗಲಿ ನಾನು ಸಿದ್ಧನಾಗಿಲ್ಲ. ಇದನ್ನು ಚೆನ್ನಾಗಿ ನೆನವರಿಕೆಯಲ್ಲಿ ಇರಿಸಿಕೊಳ್ಳಬೇಕೆಂದು ವಿನಂತಿಸುತ್ತೇನೆ. ಅದಕ್ಕೆ ಒಪ್ಪುವಿರಾದರೆ ಮಾತ್ರ ಈ ನಾಲ್ಕು ಮಾತುಗಳನ್ನು ಸ್ವೀಕರಿಸಿರಿ, ಇಲ್ಲವಾದರೆ ಅವನ್ನು ಆದ್ಯಂತವಾಗಿ ಬಿಟ್ಟುಬಿಡಿ. ಈ ಮಾತುಗಳನ್ನು ಮರೆಯಬೇಡಿ. ನಾನು ಹೀಗೆ ವಿನಂತಿಸಿಕೊಂಡಿರುವ ಮೇರೆಗೆ ನೀವು ನಡಕೊಳ್ಳುವಿರೆಂದು ನನಗೆ ಭರವಸೆಯನ್ನು ಕೊಡತಕ್ಕಂತೆ ಒಂದೆರಡು ಪಂಕ್ತಿಗಳನ್ನು, ಈ ಪತ್ರವನ್ನು ಕಂಡಕೂಡಲೇ ಇದರೊಂದಿಗೆ ಇಟ್ಟು ಕಳುಹಿಸಿರುವ ನನ್ನ ಮೇಲು ವಿಳಾಸ ಬರೆದ ಕಾರ್ಡಿನಲ್ಲಿ ಬರೆದು ದಯಮಾಡಿ ತಿಳುಹಿಸಬೇಕಾಗಿ ವಿನಂತಿಸುತ್ತೇನೆ. ದಯಮಾಡಿ ನಿರಾಶಿಸಬಾರದೆಂದೂ ವಿನಂತಿಸುತ್ತೇನೆ. ಈ ಉಪಕಾರದ ಬಗ್ಗೆ ಅನೇಕಾನೇಕ ಧನ್ಯವಾದಗಳು.

ಇತಿ ನಮಸ್ಕಾರ

೧೧೭

**ವಿಜಯನಾಥ ಶೆಣಾಯಿ (ಉಡುಪಿ)** ೨೯-೩-೬೨

ಗೋವಿಂದ ಪೈ ಮಾಡುವ ನಮಸ್ಕಾರ. ನಿಮ್ಮ ನಿನ್ನೆಯ ತಾರೀಕಿನ ಆಂಗ್ಲ (English) ಪತ್ರ ಇಲ್ಲಿಗೆ ಇವತ್ತು ಮುಟ್ಟಿ ಆ ಬಗ್ಗೆ ಧನ್ಯವಾದಗಳು. ನಿಮ್ಮ ಪತ್ರವೆಂದರೆ ಹತ್ತುಮಂದಿಗೆ ತಿಳಕೊಳ್ಳಬೇಕೆಂಬ ಕುತೂಹಲದ ವಿಷಯವನ್ನು ಕುರಿತಿದೆ ಎಂಬುವದರಿಂದ ನಾನದಕ್ಕೆ ಕನ್ನಡದಲ್ಲಿ ಪ್ರತ್ಯುತ್ತರಿಸುವುದೇ ಲೇಸೆಂದು ನಿಶ್ಚಯಿಸಿ ಹಾಗೆ ಮಾಡಿರುತ್ತೇನೆ. ನಿರುಪಾಯವಾಗಿ ಹಾಗೆ ಮಾಡಬೇಕಾಗಿರುವ ಬಗ್ಗೆ ದಯವಿಟ್ಟು ಕ್ಷಮಿಸುವುದು.

ಸಂಗೀತವೆಂದರೆ ಗಾಯನ ವಿದ್ಯೆಯ ಪ್ರತ್ಯಕ್ಷ ರೂಪ. ಸಂಗೀತದಲ್ಲಿ ಆಸಕ್ತಿ ಇಲ್ಲದ ವ್ಯಕ್ತಿಗಳು ಇರುವರಾದರೆ ಅವರು ನೂರರಲ್ಲಿ .00000೧ಕ್ಕಿಂತಲೂ ಎಷ್ಟೋ ಕಡಿಮೆ ಸಂಖ್ಯೆಯವರು. ಅಷ್ಟಾದರೂ ಇದ್ದಾರೆಂದು ನಾನು ಬಲ್ಲೆ. ಅವರನ್ನು ನಮ್ಮ ಎಣಿಕೆಯಿಂದ ಬಿಟ್ಟುಬಿಟ್ಟರೆ ಸಂಗೀತವೆಂದರೆ ಎಲ್ಲರೂ ಬೇಕು ಬೇಕೆಂದು ಹಂಬಲಿಸುವ ವಿಷಯ.

ಸನಾತನ ಧರ್ಮೀಯರಾದ ನಮಗೆ ನಾಲ್ಕು ವೇದಗಳು ಹೇಗೋ ಹಾಗೆಯೇ ನಾಲ್ಕು ಉಪವೇದಗಳೂ ಇವೆ. ಆ ಉಪವೇದಗಳಲ್ಲಿ ಗಾಂಧರ್ವವೇದವೂ ಒಂದು. ಗಾಂಧರ್ವ ವೇದವೆಂದರೆ ಸಂಗೀತ ವಿದ್ಯೆ, ಗಾಯನ ಶಾಸ್ತ್ರ. ಕ್ಷಣ ಮಾತ್ರಕ್ಕೆ ಯೋಚಿಸಿ ನೋಡಿದರೆ ಆ ವಿದ್ಯೆ ನಮ್ಮ ಹಿಂದುಸ್ಥಾನಕ್ಕೆ ಸಹಸ್ರಾರು ವರ್ಷಗಳಿಂದಲೂ ಮಾನ್ಯವೆನಿಸುತ್ತಿರುವ ವಿದ್ಯೆಯಾಗಿತ್ತೆಂದು ನಿಷ್ಪನ್ನವಾಗುತ್ತದೆ. ನಮ್ಮ ಸಮಗ್ರ ಹಿಂದೂಸ್ಥಾನದ ಸಂಗೀತದಲ್ಲಿ ಹಿಂದೂಸ್ಥಾನೀ ಸಂಗೀತವೆಂದೂ ಕರ್ಣಾಟಕದ ಸಂಗೀತವೆಂದೂ ಎರಡು ಭೇದಗಳಿವೆ. ಅವಲ್ಲಿ ಹಿಂದೂಸ್ಥಾನೀ ಸಂಗೀತವೆಂದರೆ ಉತ್ತರ ಹಿಂದೂಸ್ಥಾನದಲ್ಲಿ ವ್ಯಾವಹಾರಿಕವಾಗಿರುವ ರೀತಿ ಒಂದು, ಹಾಗೂ ಕರ್ಣಾಟಕ ಸಂಗೀತವೆಂದರೆ ಸಮಗ್ರ ದಕ್ಷಿಣ ಹಿಂದೂಸ್ಥಾನದಲ್ಲಿ ಪ್ರಚಾರವಾಗಿರುವ ರೀತಿ ಮತ್ತೊಂದು. ಇವುಗಳಲ್ಲಿ ಚೋದ್ಯದ ಸಂಗತಿ ಎಂದರೆ ಅವೆರಡೂ ವಿಧಾನಗಳಿಂದ ಒಂದೇ ರಾಗದಲ್ಲಿ ಕೇಳಿಸುವಂತೆ ಒಂದು ಗೀತವನ್ನು ಹಾಡಿದರೆ, ಆ ರಾಗದ ಹೆಸರಾದರೋ ಹಿಂದುಸ್ಥಾನೀ ಸಂಗೀತದ ರೀತಿಯಲ್ಲಿ ಒಂದು, ಅದೇ ರಾಗದ ಹೆಸರು ದಾಕ್ಷಿಣಾತ್ಯ ಸಂಗೀತದ ರೀತಿಯಲ್ಲಿ ತೀರ ಬೇರೊಂದು ! ಇದಕ್ಕೆ ಒಂದು ಉದಾಹರಣೆಯಾಗಿ ಹೇಳುವುದಾದರೆ, ಹಿಂದುಸ್ಥಾನೀ ಸಂಗೀತದಲ್ಲಿ ಭೈರವಿ ಎಂದು ಹೇಳಲ್ಪಡುವ ರಾಗವು ಕರ್ಣಾಟಕ ಸಂಗೀತದಲ್ಲಿ "ತೋಡಿರಾಗ"ವೆಂದು ಕರೆಯಲ್ಪಡುತ್ತದೆ. ಅಂದರೆ ರಾಗ ಒಂದೇ, ಅದರ ಹೆಸರುಗಳು ಮಾತ್ರ ಬೇರೆ, ಬೇರೆ ಇತ್ಯಾದಿ.

ನನ್ನ ಈಗಣ ಅಶಕ್ತತೆಯಿಂದಾಗಿ, ಇಲ್ಲಿಂದ ಹೊರಗೆ ಹೋಗಲಿಕ್ಕೆ ನನಗೆ ಶಕ್ಯವಿಲ್ಲ. ದಯವಿಟ್ಟು ಕ್ಷಮಿಸುವುದು.

ನಾಡದು ಎಪ್ರಿಲ್ ೮ನೆಯ ತಾರೀಕಿನಂದು ಶ್ರೀ ದೇವರ ದಯೆಯಿಂದ ನಿಮ್ಮ ಸಂಗೀತ ಸಭೆಯ ಆಶ್ರಯದಲ್ಲಿ ಜರಗಲಿಕ್ಕಿರುವ ಸಂಗೀತೋತ್ಸವದಲ್ಲಿ ನೆರದಿರುವ ಶ್ರೋತೃಮಹಾಶಯರೆಲ್ಲರೂ ಸುಖಾನುಭವವನ್ನು ಪಡೆಯುವಂತೆ ಶ್ರೀ ದೇವರು ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತೇನೆ.

ಈಗ ಯಾರೊಂದಿಗಾದರೂ ಕೂತುಕೊಂಡು ಮಾತಾಡುವಷ್ಟು ಕೂಡಾ ತಾಳ್ಮೆ ನನಗಿಲ್ಲ. ಏನೋ ಶ್ರೀ ದೇವರ ದಯೆಯಿಂದ ಇದುವರೆಗೂ ಓದುತ್ತೇನೆ, ಚಿಲ್ಲರೆ ಚಿಲ್ಲರೆಯಾಗಿ ಬರೆಯುತ್ತೇನೆ ಕೂಡಾ. ಅಂದರೆ ಹೆಚ್ಚಾಗಿ ನನಗೆ ದಿನೇ ದಿನೇ ಬರುತ್ತಿರುವ ಕಾಗದ ಪತ್ರಗಳಲ್ಲಿ ಅವರು ನನಗೆ ಹಾಕಿದ ಆಯಾ ಪ್ರಶ್ನೆಗಳಿಗೆ ಪ್ರತ್ಯುತ್ತರವಾಗಿ ಅಷ್ಟೇ.

ಇತಿ ನಮಸ್ಕಾರ

೧೧೮

**ಪಾದೂರು ಗುರುರಾಜಭಟ್ಟ** (ಉಡುಪಿ) ೩೦-೪-೬೨

ಗೋವಿಂದ ಪೈ ಮಾಡುವ ನಮಸ್ಕಾರ. ನಿಮ್ಮ ೨೦ನೆಯ ತಾರೀಕಿನ ಪತ್ರ ಮುಟ್ಟಿ ಧನ್ಯವಾದಗಳು. ಓದಿನೋಡಿದೆ. ನನಗೀಗ ೮೦ನೆಯ ವರ್ಷ ನಡೆಯುತ್ತಿದೆ. ಬಹಳ ಅಶಕ್ತತೆಯಿದೆ. ನೆನಪು ಬಲಕುಂದಿದೆ. ಬಲತೋಳು ಬರೆದು ಬರೆದು ಬಹಳ ನೋಯುತ್ತದೆ. ಹೀಗಾಗಿ ನಿಮ್ಮ ಪತ್ರದಲ್ಲಿ ಕೇಳಿರುವ ಬಗೆಯ ಬಹಳ ಗುರುತರವೂ ಗಂಭೀರವೂ ಆದ ಪ್ರಶ್ನೆಗಳಿಗೆ ಯಥೋಚಿತವಾಗಿ ಪ್ರತ್ಯುತ್ತರ ಬರೆಯಲಾಗುವುದಿಲ್ಲ. ದಯಮಾಡಿ ಕ್ಷಮಿಸುವುದು. ನೀವು ಈ ಬಗ್ಗೆ ಇತರತ್ರ ವಿಚಾರಿಸಿ ನಿಮ್ಮ ತೊಡಕುಗಳನ್ನು ನಿವಾರಿಸಿಕೊಳ್ಳುವುದು ಲೇಸೆಂದು ಸೂಚಿಸುತ್ತೇನೆ. ಈ ಕುರಿತು ಮತ್ತೊಮ್ಮೆ ನನಗೆ ದಯಮಾಡಿ ಬರೆಯಬಾರದೆಂದೂ ವಿನಂತಿಸುತ್ತೇನೆ.

ಹಾಗೂ ಶ್ರೀ ದೇವರು ನಿಮ್ಮಲ್ಲಿ ದಯೆದೋರಿ ನಿಮ್ಮ ಈಗಣ ಅನ್ವೇಷಣದ ಪಥದಲ್ಲಿ ನಿಮಗೆ ಬೆಳಕು ಬೀರುವ ಅನುಗ್ರಹ ಮಾಡಲಿ ಎಂದು ಪ್ರಾರ್ಥಿಸುತ್ತೇನೆ.

ಇತಿ ಶಮ್

ಇತಿ ನಮಸ್ಕಾರ

P.S. (೬) "ಮಂಜುಶ್ರೀ" "ಮಂಜುಘೋಷ"ಗಳೆಂಬವು ಜೈನ ಹೆಸರುಗಳಲ್ಲ. ಮಹಾಯಾನ (ಅಂದರೆ ತಿಬೇಟಿನಲ್ಲಿ ಪ್ರಚಾರದಲ್ಲಿರುವ) ಬೌದ್ಧಧರ್ಮದ ದೇವತೆಗಳ ಹೆಸರುಗಳು. ಈ ಕುರಿತು ನನ್ನ ಲೇಖವು ಮೈಸೂರಿನ ಕಾವ್ಯಾಲಯದವರೊಂದಿಗಿದೆ.

(೭) "ಉಡುಪಿ" ಎಂಬ ಹೆಸರು ಹೇಗೆ ಬಂತೆಂದು ಹೇಳಲಾರೆ. Kittelರ ಕೋಶದಲ್ಲಿ "ಉಡುಪ" ಎಂಬ ಶಬ್ದಕ್ಕೆ ನಂ. ೫ನೆಯ ಅರ್ಥವಾಗಿ ಹೇಳಿರುವ ಆ ಶಬ್ದವು ಸಂಸ್ಕೃತ "ಉಡುಪ". ನನ್ನ ಅಭಿಪ್ರಾಯವಾದರೆ "ಉಡುಪ"ನೆಂದರೆ ಚಂದ್ರನೆಂದೇ. ಏಕೆಂದರೆ ಸುಮಾರು ೧೨೦೦-೧೩೦೦ಕ್ಕಿಂತ ಹೆಚ್ಚಿಗೆ ಹಿಂದಿನ ನಮ್ಮ ತುಳುನಾಡಿನಲ್ಲಿಯ ಊರುಗಳನ್ನು ಹೆಸರಿಸಿರುವ ಮಂಜು(ಲ) ಕ್ಷೇತ್ರ ಮಹಾತ್ಮ್ಯವೆಂಬ ಮಂಜೇಶ್ವರದ ಮಹಾತ್ಮ್ಯದಲ್ಲಿ ಉಡುಪಿಯನ್ನು "ವಿಧೋಃ ಕ್ಷೇತ್ರ" ಎಂದರೆ ಚಂದ್ರನ ಊರು ಎಂದದೆ. ಪ್ರಾಯಶಃ ಉಡುಪಿ ಎಂಬ ಊರು ತುಳುವೊ ಕನ್ನಡವೊ "ಒಡ್ಪು" ಇತ್ಯಾದಿ ರೂಪದ ಶಬ್ದದ ರೂಪಾಂತರವಾಗಿರಬೇಕೆಂದು ನನ್ನ ಊಹೆ. ನಿಮ್ಮ ಉಡುಪಿಯ ಮುನಿಸಿಪಾಲಿಟಿಯ ರಜತ (ಸುವರ್ಣ?) ಉತ್ಸವ ಸಂದರ್ಭದಲ್ಲೇನೋ ಪ್ರಕಟವಾದ ವಿಶೇಷ ಸಂಚಿಕೆಯಲ್ಲಿ ನಾನು ಉಡುಪಿಯನ್ನು ಕುರಿತು ಒಂದು ಲೇಖವನ್ನು ಬರೆದಿದ್ದೆ. ಅದರ ಪ್ರತಿ ಈಗ ನನ್ನೊಂದಿಗೆ ಇಲ್ಲ-ಏಕೆಂದರೆ ನನ್ನ ಲೇಖಗಳನ್ನು ಮುದ್ರಿಸಿ ಪ್ರಕಟಿಸುವ ಅಧಿಕಾರವನ್ನು ಮೈಸೂರಿನ ಕಾವ್ಯಾಲಯದವರಿಗೆ ಕೊಟ್ಟಿರುವುದರಿಂದ ನನ್ನ ಲೇಖನಗಳನ್ನೆಲ್ಲ ಅವರು ಕೊಂಡು ಹೋಗಿ ಈಗ ನನ್ನೊಂದಿಗೆ ಇಲ್ಲಿ ಒಂದೂ ಇಲ್ಲ. ನಿಮ್ಮ ಮಿಕ್ಕ ಪ್ರಶ್ನೆಗಳು ನನ್ನ ವಿಚಾರ ಸರಣಿಯಲ್ಲಿ ಈ ಮುಂಚೆ ಒದಗಿರಲಿಲ್ಲವೆಂದು ಊಹಿಸುತ್ತೇನೆ. ಅಥವಾ ಅವು ಒದಗಿದ್ದು ಆ ಕುರಿತು ಬರೆದಿರುವೆನಾದರೆ ನನ್ನ ಲೇಖನಗಳನ್ನು ಕಾವ್ಯಾಲಯದವರು ಕೊಂಡುಹೋಗಿರಬೇಕು.

P.S. ನನ್ನ Geographical Dictionaryಯನ್ನು ಪ್ರಾಯಶಃ Canara High School Library ಗೇನೋ ಕೊಟ್ಟಿರುವಂತೆ ನೆನಪು. ಈಗ ಇಲ್ಲಿ ನನ್ನೊಂದಿಗಿಲ್ಲ.

ಟಿಪ್ಪಣಿ : ಡಾ. ಗುರುರಾಜಭಟ್ಟರು ತಮ್ಮ ಪಿ.ಎಚ್. ಡಿ ಸಂಪ್ರಬಂಧದ ವಿಷಯಕವಾಗಿ ೮-೧೦ ಪ್ರಶ್ನೆಗಳನ್ನು ಕೇಳಿದ್ದರಲ್ಲಿ ಒಂದೆರಡಕ್ಕೆ ಉತ್ತರಿಸಿದ್ದಾಗಿದೆ.

[ಕ್ರಿ.ಶ. ೧೯೩೯ರಲ್ಲಿ ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆಯಲ್ಲಿ (ಸಂ. ೨೪. ಸಂ. ೨) ರನ್ನನ "ಗದಾಯುದ್ಧದ ಕಾಲ ನಿರ್ಣಯ" ಎಂಬ ಲೇಖವು ಮತ್ತು ಅದೇ ವರುಷ ಮೈಸೂರಿನ ಪ್ರಬುದ್ಧ ಕರ್ಣಾಟಕದಲ್ಲಿ "ಶಿಲಾಹಾರ ಅಪರಾಜಿತನು ನೂರ್ಮಡಿ ತೈಲಪನ ಮಾಂಡಲಿಕನಿದ್ದಿರಬಹುದೇ ? " ಎಂಬ ಮತ್ತೊಂದು ಲೇಖವು ಪ್ರಕಟಿಸಲ್ಪಟ್ಟವು. ಈ ಎರಡೂ ಲೇಖಗಳ ಸಾರಾಂಶವಿಷ್ಟು : ರನ್ನನು ತನ್ನ ಅಜಿತಪುರಾಣವನ್ನು ಚಾಳುಕ್ಯ ತೈಲಪನ ಆಳಿಕೆಯಲ್ಲಿ (ಕ್ರಿ.ಶ. 973-997) ಬರೆದರೆ ಆತನು ತನ್ನ ಗದಾಯುದ್ಧವನ್ನು ತೈಲಪನ ಮಗನಾದ ಸತ್ಯಾಶ್ರಯನ ಆಳಿಕೆಯಲ್ಲಿ (ಕ್ರಿ.ಶ. 997–1008) ಬರೆದಿದ್ದಾನೆ. "ಗದಾಯುದ್ಧ"ದಲ್ಲಿ ವರ್ಣಿತವಾದ ಭೀಮ ದುರ್ಯೋಧನರ ಅಂದರೆ ಚಾಳುಕ್ಯ ಸತ್ಯಾಶ್ರಯ ಹಾಗೂ ಶಿಲಾಹಾರ ಅಪರಾದಿತ್ಯನ ಯುದ್ಧ ಕ್ರಿ.ಶ. ೧೦೦೫ರಲ್ಲಿ ಮುಗಿಯಿತೆಂದು ಡಾ|| ಎಸ್. ಅಳ್ತೇಕರವರು ಹೇಳುತ್ತಾರೆ. (Indian Culture Vol. II No. 3. PP. 405-406),

ಆದ್ದರಿಂದ ಈ ಯುದ್ಧವೇ ತಳಹದಿಯಾಗಿ ರಚಿಸಲ್ಪಟ್ಟಂಥ ಗದಾಯುದ್ಧವು ಕ್ರಿ.ಶ. ೧೦೦೫ರಿಂದ ೧೦೦೮ರೊಳಗಾಗಿ ಸುಮಾರು ಕ್ರಿ.ಶ. ೧೦೦೬ ಇಲ್ಲವೆ ಕ್ರಿ.ಶ. ೧೦೦೭ ರಲ್ಲಿ ರನ್ನನಿಂದ ರಚಿಸಲ್ಪಟ್ಟಿರಬೇಕು.

ಪ್ರಬುದ್ಧ ಕರ್ಣಾಟಕದಲ್ಲಿ ಪ್ರಕಟವಾದ ಲೇಖದ ಒಂದು ಪ್ರತಿಯನ್ನು ದಿ. ಗೋವಿಂದ ಪೈಗಳವರ ಕಡೆಗೆ ಕಳಿಸಿದ್ದೆ. ಅದಕ್ಕೆ ಉತ್ತರವೆಂದು 21-10-1939 ರಂದು ನನಗೆ ಕಾಗದ ಬರೆದು ಕೆಲವು ಸಂಗತಿ ಕೇಳಿದ್ದರು. ತಾ. 10-11-1939 ರಂದು ನಾನು ಅವರಿಗೆ ಕಾಗದ ಬರೆದಿದ್ದೆ. ನನ್ನ ಎರಡನೆಯ ಕಾಗದಕ್ಕೆ ಅವರು ಬರೆದ ಉತ್ತರ ಕೆಳಗೆ ಕೊಡಲಾಗಿದೆ. ಈ ಕಾಗದವು ತಾ. 15-12-1939 ರಂದು ಬರೆಯಲ್ಪಟ್ಟಿದೆ. ಇದು ಅವರು ನನಗೆ ಬರೆದ ಎರಡನೆಯ ಕಾಗದ. ಅವರು ಬರೆದ ಮೊದಲನೆಯ ಕಾಗದ ಕಳೆದು ಹೋಗಿದೆ. - ವೆಂ. ಬಿ. ಲೋಕಾಪುರ.]

೧೧೯

**ಶಿವರಾಮ ಕಾರಂತ** (ಪುತ್ತೂರು) ೮-೬-೬೨

ಗೋವಿಂದ ಪೈ ಮಾಡುವ ನಮಸ್ಕಾರ. ನಿಮ್ಮ 6ನೆಯ ತಾರೀಖಿನ ಪತ್ರವೂ ಅದರೊಂದಿಗೆ ಇರಿಸಿ ಕಳುಹಿಸಿರುವ ಕೋಟದ ಹತ್ತಿರದ ಶ್ರೀ ಮಹಾಲಿಂಗೇಶ್ವರ ದೇವಸ್ಥಾನದಲ್ಲಿರುವ ಶಾಸನದ ಹಸ್ತಪ್ರತಿಯೂ ಇಲ್ಲಿಗೆ ಕೈಸೇರಿ ಅನೇಕ ಧನ್ಯವಾದ ಗಳು.

ನೀವು ಕಳುಹಿಸಿದ ಶಾಸನದ ಭಾಷೆ ತಮಿಳಲ್ಲಿ ಬಹಳ ಹಳೆಯ ಹಳೆಗನ್ನಡ. ಹೆಚ್ಚು ಕಡಿಮೆ ಒಂದು ಸಾವಿರವೇ ಅಲ್ಲ ಸಾವಿರದ ಅಯ್ನೂರು ವರ್ಷಗಳಿಗಿಂತಲೂ ಹಳೆಯ ಕನ್ನಡ. ಪಂಪನ ಕ್ರಿ.ಶ. 941 ಇಸವಿಯ ಕಾಲಕ್ಕಿಂತ ಹಲವು ನೂರಲ್ಲವಾದರೆ ಕೆಲವು ನೂರಾದರೂ ವರ್ಷಗಳ ಹಿಂದಣ ಕಾಲದ ಶಾಸನವಿದು ಎಂದು ನನ್ನ ಅನು ಮಾನ. ಆದರೆ ನಾನು ತಪ್ಪಿರಬಹುದು. ಆದಕಾರಣ ನೀವು ಇದರ photographನ್ನು ತೆಗೆಯಿಸಿ. ಮೈಸೂರು ಸರಕಾರದ Archaelogical and Epigraphic Department ಗೆ ಕಳುಹಿಸಿ. ಅಲ್ಲಿ ಇದರ ಕುರಿತು ವಿಚಾರಿಸಿದರೆ ಲೇಸು ಅಥವಾ ನೀವು ಅತ್ತಕಡೆಗೆ ಹೋಗುವಾಗ ಅವರಿಗೆ ಆ Photoವನ್ನು ಕೊಟ್ಟರೆ ಮತ್ತೂ ಲೇಸು. ಹೇಗೂ ಈ ಶಾಸನವನ್ನು ಕುರಿತ ವಿಚಾರವನ್ನು ಅಲ್ಲಿಯಲ್ಲಿಗೆ ಬಿಟ್ಟುಬಿಡದೆ ಮುಂದಕ್ಕೆ ಒಯಿದು ಆ ಕುರಿತು ಕೂಲಂಕಷವಾದ ನಿಷ್ಕರ್ಷೆಯನ್ನು ಮಾಡಿಸಿಕೊಳ್ಳುವುದು ಉತ್ತಮ.

ನನ್ನ ಆರೋಗ್ಯವೀಗ ಹಾಗೂ ಅಲ್ಲ, ಹೀಗೂ ಅಲ್ಲ, ಎಂಬಂತಿದೆ. ನಡೆಯಲಿಕ್ಕೆ ಕಾಲನ್ನು ಎತ್ತಿದೆನೆಂದರೆ ಏದಬೇಕಾಗುತ್ತದೆ. (gasping). ಕುಳಿತುಕೊಂಡೆನೆಂದರೆ

ಏದಿಕೆ ಅಲ್ಲಿಯಲ್ಲಿಗೆ ಮುಗಿಯಿತು. ಹೀಗಾಗಿ ನಾನು ಮಂಜೇಶ್ವರವನ್ನು ಬಿಟ್ಟೀಗ ಹೊರಗೆ ಹೋಗುತ್ತಿಲ್ಲ-ಇದೇ ಕಳೆದ ಫೆಬ್ರುವರಿಯಲ್ಲಿ ಮೈಸೂರು Chief Justice ಶ್ರೀ ನಿಟ್ಟೂರು ಶ್ರೀನಿವಾಸರಾಯರು ಮಂಗಳೂರಿಗೆ ಬಂದಿದ್ದಾಗ ನನ್ನ ಬಹು ಕಾಲೀನ ಸ್ನೇಹಿತರಾದ ಅವರನ್ನು ನೋಡಲಿಕ್ಕೆ ಮಂಗಳೂರಿಗೆ ಹೋಗಿ ಮಾರನೆಯ ದಿನವೇ ಇಲ್ಲಿಗೆ ಬಂದಿದ್ದೆ. ಇಲ್ಲಿಯಾದರೂ ನನ್ನ ಅಜ್ಜನವರ ಮನೆಗೆ ಮುಂಚಿ ನಂತೆ ಹಪ್ತೆಗೆ ಇಮ್ಮೆ ಒಮ್ಮೆ ಹೋಗುವುದಿಲ್ಲ. 15ದಿನಗಳಿಗೊಮ್ಮೆ ಹೋಗುವು ದಾದರೂ ಕಾರನ್ನು ತರಿಸಿಕೊಂಡು ಅದರಲ್ಲಿ ಹೋಗಿಬಿಡುತ್ತೇನೆ. ನನಗೀಗ 80 ನೆಯ ವರ್ಷ ನಡೆಯುತ್ತಿದೆ. ಈಗಣ ಶಕ್ತಿ ಪ್ರಾಯಕ್ಕೆ ಅನುಗುಣವಾಗಿ ಇದೆ ಯಾದರೂ ಈ ಏದಿಕೆ ಮತ್ತು ಬಲಗೈಯ ನೋವು ಮುಂತಾದ ಹಲವು ಬಗೆಯ ತೊಂದರೆಗಳಿವೆ. ಅಂದರೆ ಜೀವಕ್ಕೆ ಹೊರಗೆ ಹೋಗುವರೆ ಒಂದೊಂದೇ ಬಾಗಿಲು ತೆರೆಯುತ್ತಲಿದೆ. ನಿಮ್ಮ ಹೆಂಡತಿ ಸೌ॥ ಲೀಲಾ ಕಾರಂತರ ಹಾಗೂ ಚಿರಂಜೀವಿಗಳ ಹಾಗೂ ನಿಮ್ಮ ಕೂಡ ಆರೋಗ್ಯ ಹೇಗಿದೆ ? ಶ್ರೀ ದೇವರು ನಿಮಗೂ ನಿಮ್ಮ ಸೌಭಾಗ್ಯವತಿಗೂ ಚಿರಂಜೀವಿಗಳಿಗೂ ದೀರ್ಘಾಯುರಾರೋಗ್ಯವನ್ನಿತ್ತು ಉತ್ತ ರೋತ್ತರ ಅಭಿವೃದ್ಧಿ ಮಾಡಿ ಸದಾ ಕಾಪಾಡುತ್ತಿರಲಿ ಎಂದೂ ನಿಮ್ಮ ವಿಜ್ಞಾನ ಪ್ರಪಂಚದ ರಚನಾಕಾರ್ಯವು ನಿರ್ವಿಘ್ನವಾಗಿ ಶೀಘ್ರವಾಗಿ ಮುಗಿದುಕೊಳ್ಳಲಿ ಎಂದೂ ಆತನನ್ನು ಪ್ರಾರ್ಥಿಸುತ್ತೇನೆ.

ಇತಿ ನಿಮಗೂ ಶ್ರೀಮತಿ ಕಾರಂತರಿಗೂ ನಮಸ್ಕಾರಗಳು. ಚಿರಂಜೀವಿಗಳೆಲ್ಲವರಿಗೆ ನನ್ನ ಹೃತ್ಪೂರ್ವಕ ಆಶೀರ್ವಾದಗಳು.

೧೨೦

**ಮಂಗಳೂರು ಜಾರಪ್ಪ** (ಮಂಗಳೂರು) ೭-೮-೬೨

ನಮ್ಮ ಗುರುಹಿರಿಯರನ್ನು ಗೌರವಿಸುವ ಬಗ್ಗೆ ನಾವು ಆಚರಿಸತಕ್ಕ ಯಾವೊಂದು ಕಾರ್ಯವಿದೆಯೋ ಅದು ಪುಣ್ಯ ಕಾರ್ಯ. ಅದೊಂದು ಆರಾಧನೆ ತಾನೆ? ಎಂದು ನಮ್ಮ ಸನಾತನ ಧರ್ಮ ಸಾರುತ್ತಲಿದೆ. ಆ ಬಗೆಗೆ ನಾವು ಕೈಕೊಳ್ಳಬೇಕಾದ ವಿಷಯಗಳು ಯಾವವೇ ಇರಲಿ, ನಮ್ಮ ಉದ್ದೇಶವಾದರೆ ಒಂದೇ ಆಗಿರಬೇಕು, ಅದು ಸದುದ್ದೇಶ........

ಶ್ರೀ ಶ್ರೀ ನಾರಾಯಣ ಗುರುವರ್ಯರ ಪ್ರತಿವಾರ್ಷಿಕ ಪುಣ್ಯತಿಥಿಗಳಲ್ಲಿ ಅವರ ಮೂರ್ತಿಯ ಆರಾಧನೆ ಅಭಿಷೇಕ, ಅರ್ಚನೆ, ಆರತಿಯೇ ಮೊದಲಾಗಿ ಸನಾತನ ಧರ್ಮೋಕ್ತವಾದ ಪೂರ್ವೋಕ್ತ ಕ್ರಮಪ್ರಕಾರ ನಡೆದು ಬರುತ್ತಿರುವ ವಿವಿಧ ಅಂಗ ಗಳು ಹೇಗೆ ಇವೆಯೋ ಹಾಗೆಯೇ ಅವುಗಳ ಜತೆಯಲ್ಲಿ ಈಗಣ ನವಯುಗದ ಅಂಗ ವಾಗಿ ಅವರ ಯಶೋಗಾನ ಉಳ್ಳ ಅದೊಂದು ಸಾಹಿತ್ಯದ ಪ್ರಕಟೀಕರಣವೂ ಆಗಬೇಕಾದ ಆವಶ್ಯಕತೆ ಇದೆ. ಇದನ್ನು ಅಲ್ಲಗಳೆಯಲಾಗುವುದಿಲ್ಲ.

೧೨೬

ಆದಕಾರಣ ಪೂಜ್ಯ ನಾರಾಯಣ ಗುರುವರ್ಯರ ಜೀವನ ಚರಿತ್ರವನ್ನೂ, ಕೀರ್ತಿಯನ್ನೂ, ಅವರ ಮಹತ್ವವನ್ನೂ ಇತ್ಯಾದಿ ವರ್ಣಿಸಿರುವ ಲೇಖಗಳುಳ್ಳ ಅದೊಂದು ಸಂಪುಟವನ್ನು ನಿಮ್ಮ ಗುರುಭಕ್ತಿಯ ಚಿಹ್ನೆಯಾಗಿ ಪ್ರಕಟಿಸೋಣವೂ ಅದನ್ನು ಅವರ ಅಮ್ಲಾನವಾದ ನೆನಪಿಗೆ ಸಮರ್ಪಿಸೋಣವೂ ನಿಮ್ಮ ಕರ್ತವ್ಯವಾಗಿದೆ. ಆ ಕರ್ತವ್ಯವನ್ನು ನೀವು ಈಗ ಅಷ್ಟು ಭಕ್ತಿಯಿಂದ ನೆರವೇರಿಸುತ್ತಿರುವಲ್ಲಿ ನಾನು ನಿಮ್ಮನ್ನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ. ಶುಭಂ ಭೂಯಾತ್!

ಇತಿ ಪ್ರೀತಿಪೂರ್ವಕ ನಮಸ್ಕಾರಗಳು

೧೨೧

**ವೈಕುಂಠ ಬಂಟ್ವಾಳಕರ** (ಮಂಗಳೂರು) ೧೭-೮-೬೨

My dear Vaikunta,

Your kind letter of the 14th inst. to hand here today. Many thanks for it. ×.. and many more thanks to God for the healthy and happy delivery of your wife. I hope and pray that both mother and child are Quite O.K. You see, my dear Vaikunt, for about a year hence I am not casting horoscope as always now likelier than not I go wrong in making the necessary mathematical calculations. So I have sent the exact time to a good astrologer here to cast the horoscope and bring it to me in about a week, when I too shall see and go through it and I shall send you the horoscope itself and also let you know if anything has to be done as ಪರಿಹಾರ. As for the birth star of the child being ಮೂಲಾನಕ್ಷತ್ರ there are a lot of ladies born in ಮೂಲಾನಕ್ಷತ್ರ, having a very long healthy and happy married life with good children too. ಮೂಲಾನಕ್ಷತ್ರ for a girl is only bad for her mother-in-law, and that is no concern of yours or your wife. Herewith enclosed I have sent you gods' prasad of which keep some beneath the baby's bed and some beneath its mother's and that will do. I pray God to bless the father and mother and baby with a very long very healthy and very happy life.

with love to you all,

Yours very affectionately

**ಗೋವಿಂದ ಪೈ**

೧೨೨

**ಕೆ. ಶ್ರೀನಿವಾಸ ಹಾವನೂರ** (ಮುಂಬಯಿ) ೧೯-೮-೬೨

ಗೋವಿಂದ ಪೈ ಮಾಡುವ ನಮಸ್ಕಾರ. ನಿಮ್ಮ ಒಂದನೆಯ ತಾರೀಕಿನ ಕಾರ್ಡು ಇಲ್ಲಿಗೆ ಮುಟ್ಟುವಾಗ ಇಲ್ಲಿ ಹಲ ದಿನಗಳಿಂದ ಸುರಿಯುತ್ತಿರುವ ಬಿರುಮಳೆಯಿಂದಾಗಿ ಕೊಂಚ ಅನಾರೋಗ್ಯದಿಂದಿದ್ದು ಅದಕ್ಕೆ ಪ್ರತ್ಯುತ್ತರವನ್ನು ಈ ಮುಂಚೆ ಬರೆಯಲಿಕ್ಕಾಗದ ಬಗ್ಗೆ ದಯಮಾಡಿ ಕ್ಷಮಿಸುವುದು. ಆ ಬಗ್ಗೆ ಅನೇಕ ಧನ್ಯವಾದಗಳು. ಶ್ರೀ ಮುಗಳಿಯವರ "ಕನ್ನಡ ಸಾಹಿತ್ಯ ಚರಿತ್ರೆ"ಯ ಪ್ರತಿ ಮೈಸೂರಿನ ಪ್ರೆಸ್ಸಿನ ಶ್ರೀ ಹಬ್ಬುರವರ ಕಡೆಯಿಂದ ನನಗೆ ನಿನ್ನೆ ಬಂದಿದೆ. ಆದರೆ ಆಗ್ಗೆ ನಿಮ್ಮ ಕಾರ್ಡನ್ನು ಹುಡುಕಾಡಿ ದೊರೆಯದೆ, ಆ ಪ್ರತಿಯನ್ನು ಕಳುಹಿಸಿ ಕೊಡಿಸಿದವರಾರು? ಶ್ರೀ ಮುಗಳಿಯವರೋ? ನೀವೋ? ಎಂದು ನಿಶ್ಚಯಿಸಲಾರದೆ ಆ ಕುರಿತು ಸರಿಯಾಗಿ ತಿಳಕೊಳ್ಳುವ ಬಗ್ಗೆ ನಿನ್ನೆ ಶ್ರೀ ಹಬ್ಬುರವರಿಗೆ ಬರೆದೆ, ಅದನ್ನು ಕಳುಹಿಸಿದವರು ಅಥವಾ ಕೊಡಿಸಿದವರು ಯಾರೆಂದು ತಿಳುಹಿಸಬೇಕೆಂದು.

ಇವತ್ತಾದರೆ ನಿಮ್ಮ ಕಾರ್ಡು ತನ್ನಷ್ಟಕ್ಕೆ ದೊರಕಿ, ಶ್ರೀ ಮುಗಳಿಯವರಿಗೂ ಆ ಕುರಿತು ಧನ್ಯವಾದಗಳನ್ನು ಬರೆದಿಟ್ಟೆ. ಈಗ ನಿಮಗೂ ಧನ್ಯವಾದಗಳನ್ನು ಈ ನನ್ನ ಪತ್ರದ ಮೂಲಕ ಸಲ್ಲಿಸುತ್ತೇನೆ. ಬಹಳ ಕೃತಜ್ಞನಾಗಿರುತ್ತೇನೆ, ನಿಮ್ಮಿಬ್ಬರದೂ ಬಹಳ ಉಪಕಾರದ ಬಗ್ಗೆ. ಈ ಪುಸ್ತಕವು ಮುಗಳಿಯವರ ಕೃತಿಯ ಎರಡನೆಯ ಹೆಚ್ಚಿಸಿದ (Enarged) ಆವೃತ್ತಿ. ಇದರ ಬೆಲೆ ಎಂಟು ರೂಪಾಯಿ, ಅಂದರೆ ಈಗಣ ದಿನಗಳಲ್ಲಿ ಅದೊಂದು ಗಂಟು ತಾನೇ ಅಲ್ಲವೆ? ಅದನ್ನು ಅವರಿಗೆ ಒಪ್ಪಿಸಬೇಕೆಂದು ನನ್ನ ಮನಸ್ಸು ತೀರಾ ಆತುರಿಸುತ್ತಿದೆ. ಹೇಗೆ ನಡೆಯಬೇಕೆಂದು ದಯಮಾಡಿ ನನಗೆ ತಿಳಿಸಬೇಕೆಂದು ವಿನಂತಿಸುತ್ತೇನೆ.

ಇತಿ ನಮಸ್ಕಾರ

೧೨೩

**ವೈಕುಂಠ ಬಂಟ್ವಾಳಕರ** (ಮಂಗಳೂರು) ೨೮-೮-೬೨

My dear Vaikunt,

your kind letter of the 14th inst. duly to hand here. Thanks. You see on account of my old age, likelier than not, I go wrong in doing astrological calculations, so I am now

getting them cast by a well-known local astrologer, Sri M. Krishna (alias Appa) Bhat. For a few days he was rather indisposed, so I did not like to disturb him. Only a couple of days ago, I called him to our house and asked him to cast a horoscope of the child and he brought it to me yesterday. I went over it and found it very well done. Nowadays I am getting horoscopes cast by him and we both of us go through it and then I pass it on to the party. He has also said something about ಪರಿಹಾರ which I have clearly explained to you in my letter. × × ×. little box (ಕರಡಿಗೆ) and put your fortnight ಕಾಣಿಕೆ for the child in it from the 1st of next September to the end of February or even March if you like, and thereafter send that collection to any one of these three temples, namely Bantaval, Mangalore or Manjeshwar as you please. That is all.

I pray God to bless you, your wife and the new born baby with a very long very healthy and very happy life of life-long peace, piety (ಭಕ್ತಿ) and prosperity. So God bless! With love to you all.

Yours very affectionately

Enclosure : Horoscope

೧೨೪

**ಕೆ. ವೆಂಕಟ್ರಾಯಾಚಾರ್ (ಸುರತ್ಕಲ್)** ೩-೧೦-೬೨

ಗೋವಿಂದ ಪೈ ಮಾಡುವ ನಮಸ್ಕಾರ. ನಿಮ್ಮ ಕಾರ್ಡು ಈಗ ಮುಟ್ಟಿತು. ನಾನೀಗ ನನ್ನ ವಯಸ್ಸಿನ ೮೦ನೆಯ ವರ್ಷದಲ್ಲಿದ್ದೇನೆ. ಅದಾಗಿ ಯಾವುದನ್ನಾದರೂ ಹೊಸತನ್ನು ಓದಿ ನೋಡಬೇಕೆಂಬ ಇಷ್ಟವೂ ಇಲ್ಲ, ಓದುವ ತಾಳ್ಮೆಯೂ ಇಲ್ಲ. ದಯಮಾಡಿ ಕ್ಷಮಿಸುವುದು. ಬಹಳ ಉಪಕಾರ. ಆ ಬಗ್ಗೆ ನೀವು ಇಲ್ಲಿಗೆ ಬರಬೇಕೆಂದೂ ಇಲ್ಲ. ಅದನ್ನು ಇಲ್ಲಿಗೆ ತಂದರೂ ನಾನು ಅದನ್ನು ನೋಡುವಂತೆಯೂ ಇಲ್ಲ. ನನ್ನ ಈ ಇಳಿಪ್ರಾಯದಲ್ಲಿ ಆ ಈ ಸಂಗತಿಗಳನ್ನು ನನಗೆ ಬರೆದು ನನ್ನನ್ನು ವೃಥಾ ಕಾಡಬೇಡಿ. ನನ್ನನ್ನು ನನ್ನ ಪಾಡಿಗೆ ಬಿಟ್ಟುಬಿಡಿ. ಇನ್ನು ಆಗಾಗ್ಗೆ ಪತ್ರಗಳನ್ನು ಬರೆಯುತ್ತಿದ್ದು ನನ್ನನ್ನು ಸರ್ವಥಾ ದಣಿಸಬೇಡಿ.

ಆಗಾಗ್ಗೆ ಪ್ರತ್ಯುತ್ತರ ಬರೆಯುತ್ತಲಿರುವ ಬಗ್ಗೆ ನನಗೆ ಸರ್ವಥಾ ಸಾಧ್ಯವಿಲ್ಲ. ಬಹಳ ಉಪಕಾರ.

೧೨೫

## ಮುಂಬಯಿಯ ಶ್ರೀ ಮು.ವಿ. ನಾಯಕರಿಗೆ ಬರೆದ ಪತ್ರದ ಮುಖ್ಯಭಾಗ

೧೧-೩-೬೩

ನಮ್ಮ ಹಿಂದೂ ಪದ್ಧತಿಯ ಚಾಂದ್ರಮಾನ ಪಂಚಾಂಗದ ಪ್ರಕಾರ ನನ್ನ ೮೦ನೆಯ ಹುಟ್ಟಿದ ದಿನ ನಿನ್ನೆ ಅಂದರೆ ೧೦-೩-೬೩, ಹೋಳಿ ಹುಣ್ಣಿಮೆಯಂದು (ನಾನು ಹುಟ್ಟಿದ ತಾರೀಕು ಪಾಶ್ಚಾತ್ಯ ಪಂಚಾಂಗದ ಮೇರೆಗೆ ೨೩-೩-೧೮೮೩). ಈಗ ನನ್ನ ಆರೋಗ್ಯವಾದರೆ ಅಷ್ಟು ಒಳ್ಳೇದೂ ಆಗಿಲ್ಲ, ಕೆಟ್ಟದೂ ಆಗಿಲ್ಲ, ನಮ್ಮತ್ತಣ ಮಲೆಯಾಳಿಗಳ ಹೇಳುವ ಮೇರೆಗೆ ಒಂದು ಮಾದರಿಯಾಗಿದೆ (–ಒರು ಮಾದರಿ ಉಂಡು).

"ನೋಡಿ, ನಮ್ಮ ಭಾರತಭೂಮಿಯಲ್ಲಿ ಜನಸಂಖ್ಯೆ ವರ್ಷೇ ವರ್ಷೇ ಹೆಚ್ಚು ಹೆಚ್ಚಾಗಿ ಬರುತ್ತದೆ, ಆಹಾರವು 'ಕಡಮೆ' ಕಡಮೆಯಾಗುತ್ತದೆ. ಈ ಲೆಕ್ಕದಲ್ಲಿ ಕ್ರಿ.ಶ. ೨೦೦೦ದ ಇಸವಿಗೆ ಬರುವಾಗ ಇಲ್ಲಿಯ ಜನಸಂಖ್ಯೆಯ ಅವಸ್ಥೆ ಹೇಗಾತ್ತದೋ ಎಂದು ಅಂಥಾ ದುರವಸ್ಥೆಯನ್ನು ಪ್ರಾಪ್ತಿಸಿದ ವಿಧಾತನೇ ಬಲ್ಲ!........ ಆದಕಾರಣ ನಮ್ಮಂಥಾ ೮೦ ವರ್ಷದವರೂ ನನಗೂ ಹೆಚ್ಚಿಗೆ ಪ್ರಾಯದವರೂ ಇಲ್ಲಿಂದ ಹೊರಟು ಹೋಗದಿದ್ದರೆ, ಮುಂದಣ ಮಂದಿಗೆ ಇಲ್ಲಿ ಸ್ಥಳವೆಲ್ಲಿ ? ಇಲ್ಲಿ ತಿಂಡಿ ಎಲ್ಲಿ ? ಅದಾಗಿ ನನ್ನ ಮನಃಪೂರ್ವಕವಾದ ಯೋಜನೆ ಎಂದರೆ ಇಲ್ಲಿಂದ Exit ಆಗಬೇಕೆಂದು (Exit ಅಂದರೆ ಇಂಗ್ಲೀಷು ನಾಟಕಗಳಲ್ಲಿ 'ಹೊರಟುಹೋಗುತ್ತಾನೆ' ಎಂದು ಅರ್ಥ).

"ಮತ್ತೊಂದು ಮಾತು, ನನ್ನ ನಕ್ಷೆಯನ್ನು ದೊಡ್ಡದಾಗಿಸಿ ಇಡುವುದೇ ಮೊದಲಾದ ಯಾವ ಬಗೆಯ ಬಹಿರಂಗವಾದ ಸತ್ಕಾರಕ್ಕೂ ನಾನು ಸರ್ವಥಾ ಅರ್ಹನೂ ಅಲ್ಲ, ಒಪ್ಪುವುದೂ ಇಲ್ಲ. ನನ್ನನ್ನೇ ಕುರಿತು ಇದು ನನ್ನ ಮನಃಪೂರ್ವಕವಾದ ಭಾವನೆ. ದೇವರು ಬಲ್ಲ. ಆದಕಾರಣ ನಿಮ್ಮೊಂದಿಗೆಯೂ ನಿಮ್ಮ - ನನ್ನ ಇತರ ಮಿತ್ರರೊಂದಿಗೆಯೂ ಕೈಜೋಡಿಸಿ ಬೇಡುವೆನೆಂದರೆ ನನ್ನನ್ನು ಕುರಿತು ಆ ಯೋಜನೆಯನ್ನು ಬಿಟ್ಟುಬಿಡಿ, ತೀರ ಮರೆತುಬಿಡಿ, ಅಲ್ಲಿಯ ಅಲ್ಲಿಗೆ ತೊರೆದು ಬಿಡಿ ಎಂದು."

ಟಿಪ್ಪಣಿ : ಪೈಗಳಿಗೆ ೮೦ ವರ್ಷ ತುಂಬಿದಾಗ, ಮುಂಬಯಿಯ 'ಸಾಹಿತ್ಯ ಕೂಟ'ದವರು ಸನ್ಮಾನ ಸ್ವರೂಪದ ಕಾರ್ಯಕ್ರಮವನ್ನು ಹಮ್ಮಿಕೊಂಡಿದ್ದರು. ಕೂಟದ ನಿಮಂತ್ರಕರಲ್ಲೊಬ್ಬರಾಗಿದ್ದ ಶ್ರೀ ಮು. ವಿ. ನಾಯಕರು ಆ ಕುರಿತು ಬರೆದ ಪತ್ರಕ್ಕೆ ಪೈಯವರ ಪ್ರತಿಕ್ರಿಯೆ ಇದು. 'ನನಸಾದ ಕನಸು' ಎಂಬ ಶ್ರೀ

ನಾಯಕರ ಲೇಖದಿಂದ ('ಸಮರ್ಪಣೆ' ಕುಂದಾಪುರ, ೧೯೬೮ರ ಪ್ರಕಟನೆ) ಎತ್ತಿಕೊಂಡಿದೆ.

೧೨೬

**ಸಂಪಾದಕರು, ಚೇತನಸ್ಫೂರ್ತಿ ಪತ್ರಿಕೆ** ೨೭-೪-೬೩

ತಮ್ಮ ೧೯ನೆಯ ತಾರೀಕಿನ ಪತ್ರ ಇಲ್ಲಿಗೆ ಮುಟ್ಟಿ ಆ ಬಗ್ಗೆ ಧನ್ಯವಾದಗಳು. ನನ್ನ ಈಗಣ ಮರವೆಯ ಕಾರಣದಿಂದಾಗಿ ಕೂಡಲೇ ಪ್ರತ್ಯುತ್ತರಿಸಲಿಕ್ಕೆ ಶಕ್ಯವಾಗದ ಬಗ್ಗೆ ದಯಮಾಡಿ ಕ್ಷಮಿಸುವುದು.

ನನ್ನ ಈಗಣ ಇಳಿವಯಸ್ಸಿನ ದೆಸೆಯಿಂದ ಲೇಖವನ್ನು ಬರೆವರೆ ಅಶಕ್ಯವಾಗಿ ಕಳುಹಿಸಲಾಗಲಿಲ್ಲ. ದಯಮಾಡಿ ಕ್ಷಮಿಸುವುದು. ತಾವು ಹೊರಪಡಿಸಲಿಕ್ಕಿರುವ "ಚೇತನ ಸ್ಫೂರ್ತಿ" ಎಂಬ ಪತ್ರಿಕೆ ಕನ್ನಡ ಪತ್ರಿಕಾ ಪ್ರಪಂಚದಲ್ಲಿ ಉತ್ತಮ ತರಗತಿಯ ಪತ್ರಿಕೆಯಾಗಿ ವಾಚಕವೃಂದದ ಮೆಚ್ಚಿಕೆಗೆ ಪಾತ್ರವಾಗಿ ಕನ್ನಡನಾಡಿನಲ್ಲಿ ಚಿರಕಾಲ ಬಾಳುವಂತೆ ಶ್ರೀದೇವರು ಕಾಪಾಡುತ್ತಿರಲಿ ಎಂದು ಪ್ರಾರ್ಥಿಸುತ್ತೇನೆ.

೧೨೭

To

The Mysore University ೧-೫-೬೩

I Most gratefully I render thanks to the University of Mysore for the unique honour it has done to offer the D.Litt degree to me. So graciously ........ it has struck me. [?]

II But actually it has struck me now that I am well advanced in life, it is time that I should accept no honour, whether it is a degree or a title. This idea has (now) taken a firm hold of my mind.

III It goes without saying that in my present 81st year I should by no means go back upon it, if I would remain true to myself.

IV Under these circumstances, I am extremely sorry (to say) that I find it is quite impossible for me to persuade myself to obey the benevolent mandate of the benevolent Mysore University and accept

the great honour which it has offered to me and which by the way I gratefully declare is far beyond my deserts.

V I'm fine. I pray god heartily to bless the Mysore University with a very long, very prosperous and very glorious life. Amen.

ಟಿಪ್ಪಣಿ : ಈ ಪತ್ರದ ದಿನಾಂಕಕ್ಕೆ ಒಂದು ವಾರ ಮುಂಚೆಯೇ ತಾವು ಏನೆಂದು ಉತ್ತರ ಬರೆಯಬೇಕೆನ್ನುವ ಬಗ್ಗೆ ಯೋಚಿಸುತ್ತಾ ಇದ್ದುದು, ಅವರ ಒಂದು ಕರಡು ಪತ್ರದಿಂದ ತಿಳಿಯುತ್ತದೆ. ಶ್ರೀ ದಾಮೋದರ ಬಾಳಿಗರ ಸಂಗ್ರಹದಲ್ಲಿರುವ ಅದರ ಕೆಲವು ವಾಕ್ಯಗಳನ್ನು ಇಲ್ಲಿ ಇಲ್ಲದಿದ್ದುದನ್ನು, ಪ್ಯಾರಾ ii ರಲ್ಲಿ ಬರಬಹುದಾದದ್ದನ್ನು ಕೆಳಗೆ ಕೊಟ್ಟಿದೆ :

Sometime after the Madras University had conferred the title, Kannada Poet Laureate on me (one fine morning) it struck me that I should promise to myself that I would accept no further honour, whatever, it be, a degree, or a title, or of any of these sorts....Now that I am in my 81st year, it goes without saying that I should not go back upon that promise, if I would not become untrue to myself.... the muse of Literature herself would surely look down upon me, if I should now step back.... (ಈ ಒಕ್ಕಣಿಕೆಯನ್ನು ಒದಗಿಸಿ ಕೊಟ್ಟವರು ಶ್ರೀ ಶಿವಾಜಿ ಜೋಯಿಸರು).

೧೨೮

My dear Sri Baliga,

೨೭–೬– ?

Your Kind P.C. of the 27th to hand just this morning. I am immensely thankful to you for the very kind invitation for the "Sri Satyanarayana Vrata" which will take place this evening. But sorry I am indisposed for these two or three days, wherefore I have had to put off going to Mangalore until these 2-3 days. Please excuse. I shall go to Mangalore tomorrow, If I shall feel better, to see my niece who has

been confined [?] with a male child on the 20th inst. But your shop will be closed tomorrow.... × × × .... So I shall meet you on one of these week days. × × × till then Please excuse.

I pray God to bless you and family with a very long healthy, happy and prosperous life to one and all of you and to bless your new house as well with long life.

With love,

Yours affectionately.

ಟಿಪ್ಪಣಿ : ಇಲ್ಲಿ ವರ್ಷವನ್ನು ಕಾಣಿಸಿಲ್ಲ. ಆದರೆ ಶ್ರೀ ದಾಮೋದರ ಬಾಳಿಗರೇ, ತಮ್ಮಲ್ಲಿ ಸತ್ಯನಾರಾಯಣ ಪೂಜೆ ನಡೆದದ್ದರ ನೆನಪು ಮಾಡಿಕೊಂಡು, ಆ ವರ್ಷ ೧೯೬೩ ಎಂಬುದಾಗಿ ಶ್ರೀ ಶಿವಾಜಿ ಜೋಯಿಸರಿಗೆ ಹೇಳಿದ್ದಾರೆ. ಅಂತೂ ದೊರೆತ ಪತ್ರಗಳಲ್ಲಿ ಇದುವೆ ಕಡೆಯದು.

## ಅನುಬಂಧ : ಈಚೆಗೆ ದೊರೆತ ಎರಡು ಪತ್ರಗಳು

**೧೨೯**

**ಜೆ. ವಾಮನ ಭಟ್ಟ** (ಮಂಗಳೂರು) ೩-೧-೩೫

It is very well written and I congratulate you. It bids fair to be a faithful Kannada prose version of Kalidasa's celebrated Shakuntala Drama. In this connection I may tell you that in the eighties or nineties of the last century, the late Mr. B. Venkatachar published Kannada translation of the famous Ishvarachandra Vidyasagara's prose work "Shakuntala". So far as I know, copies of this have already been scarce long since. You can congratulate yourself that though perhaps unawares, you have set up a new image carved from the same model as that of the old, before many could know that a niche in Kannada Literature had been long emptied of its old image and I too congratulate you once again on the account.

ಟಿಪ್ಪಣಿ : ಜಿ. ವಾಮನ ಭಟ್ಟರು ರಚಿಸಿದ 'ಶಾಕುಂತಲ' ಕೃತಿಯ ಬಗ್ಗೆ ಪೈಗಳ ಅಭಿಪ್ರಾಯವಿದು. ಇಡೀ ಪತ್ರ ದೊರಕಿಲ್ಲ. ಕೆಲವು ವಾಕ್ಯಾಂಶಗಳು ಬಿಟ್ಟು ಹೋಗಿವೆ.

## ೧೩೦

## ಕುಕ್ಕಿಲ್ ಕೃಷ್ಣಭಟ್ಟ

೨೯-೭-೬೧

ಹಲವು ದಿನಗಳಿಂದ ತೊಡಗಿರುವ ಗಾಳಿ ಮಳೆಯಿಂದಾಗಿ ಯಾವ ಕೆಲಸವನ್ನೂ ಕೆಯ್ಕೊಳ್ಳದೆ ಸುಮ್ಮನಿರಬೇಕಾಗಿ, ಕೊಂಚ ಅಶಕ್ತಿಯಿಂದ ವಿಶ್ರಮಿಸುತ್ತಿದ್ದ ನಾನು ನಿಮ್ಮ 'ಕುಂಬಳೆಯ ಪಾರ್ತಿಸುಬ್ಬ ಕವಿಯ ಕಾಲ ಮತ್ತು ಕರ್ತೃತ್ವದ ನಿರ್ಣಯ' ಎಂಬ ಪುಸ್ತಕವನ್ನು ಓದಿದ್ದರೂ ನಿಮಗೆ ಪತ್ರ ಬರೆಯಲಾರದಿದ್ದೆ. ದಯಮಾಡಿ ಕ್ಷಮಿಸುವುದು.

ಪಾರ್ತಿಸುಬ್ಬನು ಕುಂಬಳೆ ಸೀಮೆಯವನೇ ಎಂದೂ, ಆತನೇ ಯಕ್ಷಗಾನ ಕಲೆಯನ್ನು ಕೇರಳದಿಂದ ನಮ್ಮ ದಕ್ಷಿಣ ಕನ್ನಡ ಜಿಲ್ಲೆಯ ತುಳುನಾಡಿನಲ್ಲಿ ತಂದನೆಂದೂ ಸಿದ್ಧಪಡಿಸತಕ್ಕಂತೆ ನೀವು ಮುಂದಿರಿಸಿರುವ ದಾಖಲೆಗಳು ಒಪ್ಪತಕ್ಕವಾಗಿವೆ, ಗ್ರಹಣೀಯವಾಗಿವೆ. ಆ ವಿಷಯಗಳಲ್ಲಿ ಇನ್ನು ಸಂಶಯಪಡತಕ್ಕಂತೆ ವಿವೇಕಿಗಳಿಗಾದರೂ ಎಡೆದೊರೆಯಲಾರದೆಂದು ನಾನು ನಂಬುತ್ತೇನೆ. ಹಾಗೂ ನಿಮ್ಮನ್ನು ಮನವಾರೆ ಅಭಿನಂದಿಸುತ್ತೇನೆ. ಶ್ರೀದೇವರು ನಿಮಗೆ ಒಳ್ಳೇದು ಮಾಡಲಿ ಎಂದು ಪ್ರಾರ್ಥಿಸುತ್ತೇನೆ.

ಇತಿ ನಮಸ್ಕಾರ

## ಪೈಗಳಿಂದ ಪತ್ರವನ್ನು ಪಡೆದವರು

---

[ಅಂಕಿಗಳು ಪತ್ರಗಳ ಅನುಕ್ರಮ ಸಂಖ್ಯೆಯನ್ನು ಸೂಚಿಸುತ್ತವೆ.]

ಉಗ್ರಾಣ ಮಂಗೇಶರಾವ ೧೦-೧೨ ೭೮
ಉಚ್ಚಿಲ್ ರಾಮಚಂದ್ರ ೧೦೪
ಐರ್ಯ ಲಕ್ಷ್ಮೀನಾರಾಯಣ ಆಳ್ವ ೯೩
ಕಾರಂತ, ಶಿವರಾಮ ೧೧೯
ಕೃಷ್ಣ ಭಟ್ಟ. ಕುಕ್ಕಿಲ್ ೧೩೦
ಗುರುರಾಜಭಟ್ಟ, ಪಿ. ೯೯ ೧೧೮
ಗೋಪಾಲರಾವ, ಕೆ ೯೨
ಚಂದ್ರಶೇಖರಯ್ಯ, ಕ ಮ ಶಿ ೭೫
ಜಾರಪ್ಪ ಮಂ ೧೨೦
ತರುಣ ಕಲಾವೃಂದ, ಮಂಗಳೂರು ೩೫
ದಾಮೋದರ ಬಾಳಿಗ, ಬಿ ೧೨೮
ನಾಯಕ. ಮ ವಿ ೧೨೫
ನಾಗರಾಜಯ್ಯ, ಪ ೧೦೦
ನಾರಾಯಣಭಟ್ಟ, ಎಸ್. ಎಲ್. ೮೪
ನಾಯಕ ಮ. ವಿ. ೧೨೫
ನಾಯಕ, ಸದಾನಂದ ೨೧ ೨೩
ಪುಟ್ಟಸ್ವಾಮಿ, ಡಿ ೫೩
ಬಂಟ್ವಾಳಕರ, ವೈಕುಂಠ ೧೨೧ ೧೨೩
ಬಾಲಕೃಷ್ಣಶೆಟ್ಟಿ, ಪೊಳಲಿ ೬೨
ಬೆಳಗಲಿ, ದು ನಿಂ ೭೭
ಭಟ್ಟ, ಕೆ. ಎನ್. ಶಿರಾಡಿಪಾಲ ೫೭ ೬೫ ೧೧೫
ಭೋಸಗೆ, ಅನಂತರಾವ ಕೆ ೫೬

ಮಾಸ್ತಿ ವೆಂಕಟೇಶ ಅಯ್ಯಂಗಾರ್ ೨೫ ೭೩
ಮಂಗಳಿ ರಂ ಶ್ರೀ ೩೩ ೭೪
ಮುನಿಪಾಲರಾಜು ೩೪ ೩೬ ೪೦ ೪೨ ೭೬
ಮೂರ್ತಿ, ಆರ್ ಎನ್ ೩೯ ೪೩ ೫೨ ೫೪-೫೫ ೯೭
ಮೈಸೂರು ವಿಶ್ವವಿದ್ಯಾನಿಲಯ ೧೨೭
ರಂಗಸ್ವಾಮಿ, ಬಿ ಟಿ ೮೧
ರಾಮ ಮೊಳೆಯಾರ ೧೧೧
ರಾಮಕೃಷ್ಣ ಸೋಮಯಾಜಿ, ಕೆ ೪೯
ರಾಮರಾಯ, ಸಮೇತನಹಳ್ಳಿ ೨೬ ೪೬ ೯೮
ಲಕ್ಷ್ಮಣ ಪೈ, ಜಿ ಎನ್ ೧-೩ ೫-೭ ೩೮ ೪೯ ೬೪ ೯೧
ಲೋಕಾಪುರ, ವೆಂ ಭೀ ೮-೯
ವಾಮನ ಭಟ್ಟ, ಜೆ ೧೨೯
ವಾಸುದೇವರಾವ, ಎಮ್ ೯೪
ವೆಂಕಟಕೃಷ್ಣರಾವ, ಬೈಕಾಡಿ ೭೦-೭೧ ೮೨ ೮೫-೮೮ ೯೦ ೧೦೩
೧೦೬-೧೦೭ ೧೦೯-೧೧೦
ವೆಂಕಟ್ರಾಯಾಚಾರ್, ಕೆ ೯೬ ೧೧೨-೧೧೪ ೧೧೬ ೧೨೪
ಶಂಕರನಾರಾಯಣ ನಾವಡ, ಅಮ್ಮೆಂಬಳ ೧೩-೧೮ ೨೨ ೨೪ ೩೧ ೪೪ ೬೩
೬೬ ೭೨ ೯೫
ಶಂಕರನಾರಾಯಣ ಭಟ್ಟ, ಮಿತ್ತೂರು ೪೧ ೪೫
ಶೀನಪ್ಪ ಹೆಗ್ಗಡೆ, ಎನ್ ಎ ೪೭ ೫೧ ೫೮-೬೧ ೭೯ ೮೦ ೧೦೫
ಶೆಣಾಯಿ, ವಿ ಎ ೮೩
ಶೆಣೈ, ವಿಜಯನಾಥ ೧೧೭
ಶೆಟ್ಟಿ ಶಿಮುಂಜೆ ಪರಾರಿ, ಎಸ್ ಎಮ್ ೮೯ ೧೦೮
ಶೇಷಗಿರಿ ಪೈ, ಎನ್ ೧೦೧-೧೦೨
ಸಂಪಾದಕರು ‘ಚೇತನ ಸ್ಫೂರ್ತಿ’ ೧೨೬
ಸೇಡಿಯಾಪು ಕೃಷ್ಣಭಟ್ಟ ೪ ೧೯
ಹರಿದಾಸಭಟ್ಟ, ಕು ಶಿ ೩೨ ೩೭
ಹಾವನೂರ, ಶ್ರೀನಿವಾಸ ೧೨೨
ಹುಯಿಲಗೋಳ, ವರದರಾಜ ೫೦
‘ಓರ್ವ ಡಾಕ್ಟರರಿಗೆ’ ೨೦

## ಪತ್ರಗಳಲ್ಲಿ ಪ್ರಸ್ತಾಪಗೊಂಡ ಅಂಶಗಳ ಅಕಾರಾದಿ

ಅಂಜನಾಚರಿತ್ರ (ಶಿಶುಮಾಯಣ ವಿರಚಿತ) ೨೯
'ಅಜಪುರ' ೧೦೩ ೧೦೭
ಅಜಿತಪುರಾಣದ ಕಾಲ ೮
ಅನುಷ್ಟುಪ್(ಭ್) ಶಬ್ದ ೧೪ ೧೫
ಅಪರಾದಿತ್ಯ (ಶಿಲಾಹಾರ ರಾಜ) ೮
'ಅಭಿನಯ ಗೀತಮಂಜರಿ' ೩೮
'ಅಭಿನಯ ಗೀತಾವಳಿ' ೩
ಆಯುರ್ವೇದ ೮೪
ಆಲೂರ ವೆಂಕಟರಾವ ೫೦
'ಉತ್ತರರಾಮಚರಿತ' (ಕೆ ವೆಂಕಟ್ರಾಯಾಚಾರ್)ಕ್ಕೆ ಮುನ್ನುಡಿ ೧೧೨–೧೧೪, ೧೧೬
ಉಡುಪಿ-ಶಬ್ದ ೧೧೮
'ಉಪದೇಶಸಾರ' (ರಮಣಮಹರ್ಷಿ)ದ ಅನುವಾದ ೪೯
ಉಲ್ಲಾಳದ ರಾಣಿ ಅಭಯಾದೇವಿ ೧೧೧
'ಕನ್ನಡ ಪದ್ಯರತ್ನಾವಳಿ' ೨
'ಕನ್ನಡ ಲೆಂಕ' (ಮಾಸ್ತಿ ವಿರಚಿತ) ೭೩
'ಕನ್ನಡಸಿರಿ' ಪತ್ರಿಕೆ ೫೫
ಕನ್ನಡ ಸಾಹಿತ್ಯ ಪರಿಷತ್ತು ೫೮
ಕನ್ನಡ ನಾಡಗೀತೆ (ಲಕ್ಷ್ಮಣ ಪೈ ರಚಿತ) ೫೮
'ಕನ್ನಡಿಗರ ತಾಯಿ' ವಿವರಣೆ ೩೧
ಕರ್ಣಾಟಕ ಪ್ರಾಂತರಚನೆ ೬೪, ೬೭
'ಕಲ್ಪನೆ ಪತ್ರಿಕೆ' ೪
'ಕಲಾರಾಧನೆ' ೯೮
ಕಾದಂಬರಿ ಪ್ರಕಾರವನ್ನು ಕುರಿತು ೯೭
ಕಾರಂತ, ಶಿವರಾಮ ೮೮

ಕಾಳಿದಾಸನ ವ್ಯಾಕರಣ ವಿರುದ್ಧ ಪ್ರಯೋಗಗಳು ೧೦೪
'ಕಿಶೋರ' ಪತ್ರಿಕೆ ೬೨
'ಕೀರ್ತನಾಂಜಲಿ' ೧
ಕುಮಾರವ್ಯಾಸ ಭಾರತದ ಒಂದು ಪದ್ಯದ ಅರ್ಥ ೮೫ ೮೬
'ಕುಮಾರಸಂಭವ' (ಅಮ್ಮೆಂಬಳ ಶಂ-ನಾ ನಾವಡ)ಕ್ಕೆ ಮುನ್ನುಡಿ ೨೧
'ಕೆನೆ ಮೊಸರು' ೫೬
'ಕೆಲವು ಸಣ್ಣ ಕಾವ್ಯಗಳು' ೧೯
ಕೊಪ್ಪಳದ ಕರ್ನಾಟಕ ಸಂಘ ೧೬
ಕೋಟೆಕಾರು ಪ್ರಧಾನ ಯುವಕ ಸಂಘ ೬೬
ಕೋಟೆಕಾರು ಶಾಲೆಯ ವರ್ಧಂತಿ ೨೭
ಕೋಟದ ಬಳಿಯ ಮಹಾಲಿಂಗೇಶ್ವರ ಶಾಸನ ೧೧೯
'ಕೌಶಿಕ ರಾಮಾಯಣ' ೧೧೫
ಗದಾಯುದ್ಧದ ಕಾಲ ೮
'ಗಿಳಿವಿಂಡು' ಪ್ರತಿಗಳು ೭೪
ಗೀತಾಂಜಲಿಯ ಭಾಷಾಂತರ ೮೩
ಗುರುನಾರಾಯಣ ಮಹಾರಾಜರು ೧೨೦
ಚಂದ್ರ (ನಾಗರಖಂಡದ ಅರಸು) ೨೩
ಚಾಮರಾಜನಗರದ ಒಂದು ಶಾಸನ ೧೨
ಚಾರುಕೀರ್ತಿ ಪಂಡಿತ ೧೦
'ಚಿಕವೀರ ರಾಜೇಂದ್ರ' ೭೩
'ಚೆಲುವು' ೯೨
'ಚೇತನ ಸ್ಫೂರ್ತಿ' (ಪತ್ರಿಕೆ) ೧೨೬
ಚೌಟರಸರು ೭೨
'ಡಾಕ್ಟರ್ ಆರೋಗ್ಯಮ್' ೬೫
ತಮಿಳು-ಕನ್ನಡ ೪೩
ತುಳು ಪಾಡ್ದನಗಳು ೧೦೫
'ತುಳುವಾಲ ಬಲಿಯೇಂದ್ರೆ' ೫೮ ೫೯
'ದಕ್ಷಿಣ ಕನ್ನಡ ಜಿಲ್ಲೆಯ ಚರಿತ್ರೆ' ೬೦
'ದಸರೆಯ ಕಾಣಿಕೆ' ೬
'ದಾಮಾಜಿ ಪಂತ' ೫
'ಧರ್ಮಭೂಷಣ' ಹೆಸರು ಮತ್ತು ಬಿರುದು (ಶಾಸನೋಕ್ತ) ೧೦
'ನವಪ್ರಭಾತ' ೮೯
'ನಮ್ಮ ಅಜಪುರ' ೧೦೭

ನಾಗವರ್ಮರು ಎಷ್ಟು ಮಂದಿ ೨೧, ೨೩
ನಿಯೋಗ ಪದ್ಧತಿ ೧೦೮
'ನೃತ್ಯ' ೫೫
'ಪ್ರಣಯ ದರ್ಶನ' ೨೨
ಪ್ರಭಾಸ (ಪೈಗಳ ಕೃತಿ) ೩೨ ೭೪
'ಪ್ರಾಚೀನ ತುಳುನಾಡು' ೬೧
'ಪುಣ್ಯಲಹರಿ' ೧೯
'ಪುಳಿನಾಪುರ ಮಹಾತ್ಮ್ಯ' ೫೧
ಫ್ಲೀಟ್, ಜೆ ಎಫ್ ೮
ಬಾಹುಬಲಿ ಪಂಡಿತ ೧೦ ೧೧
'ಬಾಳಗೆಳತಿ' ೬೯
ಬೀದರ ೧೫
ಬುದ್ಧ ಜಯಂತಿ-ಎಂದು ? ೩೬
'ಬೆನ್ನ ಹಿಂದಿನ ಕಣ್ಣು' ೭೭
ಬೇಂದ್ರೆ ದ ರಾ ೬೬, ೯೦
'ಭಗವಾನ್ ಬುದ್ಧ' ೪೨
ಭರ್ತೃಹರಿ-ಅನುವಾದ ೫೭
'ಭರತೇಶ ವೈಭವ' ೭೮
ಮಂಜಯ್ಯ ಹೆಗ್ಗಡೆ (ಧರ್ಮಸ್ಥಳ) ೫೩
ಮಂಜುಶ್ರೀ–ಮಂಜುಘೋಷ ೧೧೮
'ಮಾತಂಗಿ' ಕವನ ೯೪
ಮಾಸ್ತಿ ವೆಂಕಟೇಶ ಅಯ್ಯಂಗಾರ್ ೧೧೦
ಮುದ್ದಣ (ಮತ್ತು ಜಯಂತಿಯಾಚರಣೆ) ೩೨, ೩೪, ೩೫, ೩೭, ೭೮
ಮೇಘಚಂದ್ರ ೧೧
'ಯುವಕ ಸಂದೇಶ' (ಪತ್ರಿಕೆ) ೬೬
ರನ್ನಕವಿ ೮ ೯
'ರತ್ನಾಕರ ಪ್ರಶಸ್ತಿ' ೧೬
ರಾಮಾನುಜಾಚಾರ್ಯರು ೪೩
'ರಾಮಾಶ್ವಮೇಧ' (ಮುದ್ದಣ) ೨೬, ೯೫
'ರಾಮಾಶ್ವಮೇಧದ ರಸತರಂಗಗಳು' ೯೩
'ವರುಣ' ೩೩
ವಿ. ಸೀ. ೧೦೯
ವೀರಬಲ್ಲಾಳ ೧೦

ವೆಂಕಟಾಚಾರ್ಯ ಬಿ (ಕೃತಿಗಳು) ೪೩
'ವೈಶಾಖಿ'ಯ ವಿಮರ್ಶೆ ೧೭
'ಶ್ವಮೇಧ' ೪
'ಶಿಶುಗೀತಮಾಲೆ' ೭
ಶಿಶುಮಾಯಣ ೨೮ ೨೯
ಶ್ರೀವೈಷ್ಣವರು ೪೩
ಸತ್ಯಾಶ್ರಯ (ಚಾಲುಕ್ಯ ರಾಜ) ೮
ಸದಾಶಿವರಾವ, ಪೇಜಾವರ ೩೩
'ಸರ' ೧೮
'ಸಂಧ್ಯಾಭಾಷ್ಯ' ೪೧ ೪೫
ಸಂತೆ ಹಾಕುವುದು ೪೧
ಸಂಗೀತ ವಿಚಾರ ೧೧೭
'ಸ್ವಾತಂತ್ರ್ಯ' ೬೫
ಸಿಲ್ವಾ, ಎಸ್ (ಕಾರವಾರ) ೬
ಸೋಮನಾಥ ದೇವಾಲಯ ೭೨

ಒಬ್ಬ ಸಾಹಿತಿಯ ಸಮಗ್ರ ದರ್ಶನಕ್ಕೆ ಆತನ ಲಿಖಿತ ಸಾಹಿತ್ಯ ಹಾಗೂ ಪ್ರಚಲಿತ ಉಪನ್ಯಾಸಗಳಲ್ಲದೆ ಆತ ಖಾಸಗಿ ಯಾಗಿ ಬರೆದ ಪತ್ರಗಳೂ ನೆರವಾಗುತ್ತವೆಂಬ ಅಂಶ ಓದುಗರಿಗೆ ಹೇಗೋ ಸಾಹಿತಿಗಳಿಗೂ ಹಾಗೆಯೇ ಮನವರಿಕೆ ಯಾದಂತೆ ಕನ್ನಡ ಸಾಹಿತ್ಯದಲ್ಲಂತೂ ಕಾಣಿಸುವುದಿಲ್ಲ. ತಾವು ನಿತ್ಯ ಜೀವನದ ಸಂದರ್ಭಗಳಲ್ಲಿ, ಸಾಹಿತ್ಯ ವ್ಯವಸಾಯದ ಸಂದರ್ಭಗಳಲ್ಲಿ ಮಿತ್ರರಿಗೋ, ಅಭಿಮಾನಿಗಳಿಗೋ, ಪರಿಚಿತ ಯಾ ಅಪರಿಚಿತರಿಗೋ ಬರೆದ ಪತ್ರಗಳ ಮೂಲಕವೂ ಲೇಖಕನ ಅಭಿವ್ಯಕ್ತಿ ಸಾಧಿತವಾಗುತ್ತದೆ. ಸಾಹಿತ್ಯ ಇತಿಹಾಸ ರಚಕನಿಗೆ ಇಂಥ ವಸ್ತುಗಳು ದಾಖಲೆಗಳಾಗಿ ರೂಪು ತಳೆದಾವು ಎಂಬುದರ ಕಲ್ಪನೆ ಹೆಚ್ಚಾಗಿ ನಮ್ಮ ಲೇಖಕರಿಗೆ ಇಲ್ಲ.

ಪತ್ರಗಳ ಜತೆಗೆ ಒಂದು ವಿಶ್ಲೇಷಣಾತ್ಮಕ ಪ್ರಬಂಧವನ್ನೂ ಹೆಣೆದು ಡಾ. ಹಾವನೂರರು ಉಪಕರಿಸಿದ್ದಾರೆ. ಸಾಹಿತ್ಯ ಲೋಕಕ್ಕೆ ಸಾಹಿತಿಗಳ ಪತ್ರಗಳಿಂದ ಉಂಟಾಗಬಹುದಾದ ಪ್ರಯೋಜನಗಳನ್ನು ಸವಿವರವಾಗಿ ಮೂಡಿಸಿದ್ದಾರೆ. ಇಂಥ ಪತ್ರಗಳಲ್ಲಿ ಒಂದೇ ಸಾಹಿತ್ಯ ವಿಷಯಗಳು ಅಥವಾ ಸಾಹಿತಿಯ ವ್ಯಕ್ತಿತ್ವವನ್ನು ಮೂರ್ತೀಕರಿಸುವ ವಿಷಯಗಳು ಇರಬೇಕಾ ಗುತ್ತದೆ. ಸಾಹಿತಿಯಾದವನ ಮನೋಧರ್ಮವೂ ವಿಶಿಷ್ಟವಾಗಿರ ಬೇಕಾಗುತ್ತದೆ. ಪತ್ರಕ್ಕೆ ಉತ್ತರ ಬರೆಯುವ ಕರ್ತವ್ಯವನ್ನು ನಿರಂತರ ಆತ ಸಾಗಿಸಬೇಕಾಗುತ್ತದೆ. ಸಂಪರ್ಕ ಬೆಳೆಸುವ ಮನುಷ್ಯನ ಮೇಲೆ ಸಹಾನುಭೂತಿ ಉಳ್ಳವನಾಗಿ ಕೇಳಿದವನಿಗೆ ನಾಲ್ಕು ಸಾಲು ಬರೆಯುವ ಔದಾರ್ಯ ಆತನಲ್ಲಿರಬೇಕಾಗುತ್ತದೆ. ಇಂಥ ಸದ್ಗುಣಗಳೆಲ್ಲವೂ ದಿ. ಪೈ ಅವರಲ್ಲಿ ಏಕೀಭವಿಸಿದ್ದುದ ರಿಂದ, ಪತ್ರಗಳೂ ಅವರ ಅಭಿವ್ಯಕ್ತಿಯ ಒಂದು ಮುಖವೇ ಆಗಿ ಪರಿಣಮಿಸಿವೆ.